# ಬೇಂದ್ರೆ ಮತ್ತು ಕೆ.ಎಸ್.ನ. ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು-ಒಂದು ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ನಿಬಂಧ)

ಸಂಶೋಧಕ
ಎನ್. ಮಹಾದೇವಸ್ವಾಮಿ
ನೋಂದಣಿ ಸಂಖ್ಯೆ
KRS MKS 00364

ಮಾರ್ಗದರ್ಶಕರು
ಡಾ. ಅರ್ಜುನಪುರಿ ಅಪ್ಪಾಜಿಗೌಡ

ಕರ್ನಾಟಕ ಸಂಘ (ರಿ.) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ
ಸಂಶೋಧನ ಕೇಂದ್ರ
ಕನ್ನಡ ವಿವಿ ಹಂಪಿ ಮಾನ್ಯತೆ ಪಡೆದಿದೆ
೨೦೦೮-೦೯

# ಬೇಂದ್ರೆ ಮತ್ತು ಕೆ.ಎಸ್.ನ. ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು-ಒಂದು ತೌಲನಿಕ ಅಧ್ಯಯನ

(ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)



ಸಂಶೋಧಕ
ಎನ್. ಮಹಾದೇವಸ್ವಾಮಿ
ನೊಂದಣಿ ಸಂಖ್ಯೆ

ಮಾರ್ಗದರ್ಶಕರು
ಡಾ. ಅರ್ಜುನಪುರಿ ಅಪ್ಪಾಜಿಗೌಡ

ಕರ್ನಾಟಕ ಸಂಘ (ರಿ.) ಮಂಡ್ಯ
ಎಂ.ಎಲ್. ಶ್ರೀಕಂಠೇಶಗೌಡ
ಸಂಶೋಧನ ಕೇಂದ್ರ
ಕನ್ನಡ ವಿವಿ ಹಂಪಿ ಮಾನ್ಯತೆ ಪಡೆದಿದೆ
೨೦೦೮-೦೯

# ಬೇಂದ್ರೆ ಮತ್ತು ಕೆ.ಎಸ್.ನ. ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು-ಒಂದು ತೌಲನಿಕ ಅಧ್ಯಯನ

## ಸಂಶೋಧಕನ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನ ಕೇಂದ್ರದಲ್ಲಿ ೨೦೦೮-೦೯ನೇ ಸಾಲಿಗೆ ಕನ್ನಡ ಎಂ.ಫಿಲ್ ಪದವಿಗಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನ ನಿಬಂಧ ರಚಿಸಲು "ಬೇಂದ್ರೆ ಮತ್ತು ಕೆ.ಎಸ್.ನ. ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು-ಒಂದು ತೌಲನಿಕ ಅಧ್ಯಯನ" ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಅರ್ಜುನಪುರಿ ಅಪ್ಪಾಜಿಗೌಡ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳಾನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲಮತ್ತು ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ : ಮಂಡ್ಯ

ದಿನಾಂಕ : 29.09.09.

(ಎನ್. ಮಹಾದೇವಸ್ವಾಮಿ)

ಸಂಶೋಧಕ, ಕನ್ನಡ ವಿಭಾಗ,

ಕರ್ನಾಟಕ ಸಂಘ (ರಿ.)

ಎಂ.ಎಲ್. ಶ್ರೀಕಂಠೇಶಗೌಡ

ಸಂಶೋಧನ ಕೇಂದ್ರ, ಮಂಡ್ಯ.

(ಕನ್ನಡ ವಿವಿ ಹಂಪಿ ಮಾನ್ಯತೆ ಪಡೆದಿದೆ)

# ಬೇಂದ್ರೆ ಮತ್ತು ಕೆ.ಎಸ್.ನ. ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು-ಒಂದು ತೌಲನಿಕ ಅಧ್ಯಯನ

## ಮಾರ್ಗದರ್ಶಕರ ಪ್ರಮಾಣ ಪತ್ರ

ಬೇಂದ್ರೆ ಮತ್ತು ಕೆ.ಎಸ್.ನ. ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು-ಒಂದು ತೌಲನಿಕ ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಗಾಗಿ ಶ್ರೀ ಎನ್. ಮಹಾದೇವಸ್ವಾಮಿ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಧೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ
ದಿನಾಂಕ : 29/09/09.

ಡಾ. ಅರ್ಜುನಪುರಿ ಅಪ್ಪಾಜಿಗೌಡ
ಕರ್ನಾಟಕ ಸಂಘ (ರಿ.)
ಎಂ.ಎಲ್. ಶ್ರೀಕಂಠೇಶಗೌಡ
ಸಂಶೋಧನ ಕೇಂದ್ರ, ಮಂಡ್ಯ.
(ಕನ್ನಡ ವಿವಿ ಹಂಪಿ ಮಾನ್ಯತೆ ಪಡೆದಿದೆ)

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಹೊಸಗನ್ನಡ ಸಾಹಿತ್ಯ ಇತಿಹಾಸದಲ್ಲಿ 'ಅಂಬಿಕಾತನಯದತ್ತ' ಎಂಬ ಕಾವ್ಯನಾಮದಿಂದ ಶೋಭಾಯಮಾನರಾಗಿರುವ ದತ್ತಾತ್ರೇಯರಾಮಚಂದ್ರ ಬೇಂದ್ರೆ ಹೊಸಗನ್ನಡ ಭಾವಗೀತೆಯ ಮೂಲ ಪ್ರವರ್ತಕರಲ್ಲೊಬ್ಬರು ಹಾಗೂ ಅದರ ಪ್ರಮುಖ ಪ್ರತಿನಿಧಿಗಳು. ಅವರ ಜೀವನ, ಸಾಹಿತ್ಯ, ಸಾಧನೆ ಮುಂತಾದದೆಲ್ಲವೂ ಅನನ್ಯ ಅನುಪಮವಾದದ್ದು. ಅವರ ಜೀವನವೇ ಕಾವ್ಯ, ಇವರದು ಪ್ರಧಾನವಾಗಿ ಕವಿಹೃದಯ, ಭಾವಗೀತೆಗಳೇ ಇವರ ಸಾಹಿತ್ಯದ ಜೀವನಾಡಿ. ಕಾವ್ಯಕ್ಷೇತ್ರವಲ್ಲದೆ ನಾಟಕ,ವಿಮರ್ಶೆ, ಸಣ್ಣಕಥೆ, ಸಂಶೋಧನೆ, ಅನುವಾದ ಮೊದಲಾದ ಕ್ಷೇತ್ರಗಳಲ್ಲಿ ಅವರು ಸಾಕಷ್ಟು ಸಾಧನೆ ಮಾಡಿದ್ದಾರೆ. ಹೀಗೆ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಕೆಲಸ ಮಾಡಿರುವ ಕವಿಪ್ರಭೆಯ ಕಾವ್ಯಕ್ಷೇತ್ರವೂ ವಸ್ತು ವೈವಿಧ್ಯತೆಯಿಂದ ಕೂಡಿದೆ.

ನವೋದಯ ಕನ್ನಡ ಸಾಹಿತ್ಯದಲ್ಲಿ 'ಒಲುಮೆಯಕವಿ' ಎಂದೇ ಪ್ರಸಿದ್ಧರಾಗಿರುವ ಕವಿ ಕೆ.ಎಸ್.ನರಸಿಂಹಸ್ವಾಮಿಯವರ ಕಾವ್ಯಕ್ಷೇತ್ರದಲ್ಲಿನ ಸಾಧನೆ ಅನನ್ಯವಾದದ್ದು. ಇವರು ನವೋದಯಲ್ಲಿ ಮಾತ್ರವಲ್ಲದೆ ಪ್ರಗತಿಶೀಲ ಹಾಗೂ ನವ್ಯಮಾರ್ಗಗಳ ಪ್ರಭಾವಕ್ಕೆ ಒಳಗಾಗಿ ಅವುಗಳ ದಾರಿಯಲ್ಲಿ ಕ್ರಮಿಸಿದರು. ಆದರೆ ತಮ್ಮ ಜಾಯಮಾನಕ್ಕೆ ಸರಿಬೀಳದೆ ಮತ್ತೆ ಮೂಲನೆಲೆಗೆ ಬಂದು ತಮ್ಮ ಎಂದಿನ ಕಾವ್ಯರಚನೆಯನ್ನು ಮುಂದುವರಿಸಿದ್ದು ಅವರ ಕಾವ್ಯರಚನೆಯ ಇತಿಹಾಸದಲ್ಲಿ ಒಂದು ಮುಖ್ಯವಾದ ಅಂಶ. ಆದ ಕಾರಣ ಇವರು ವಸ್ತು, ದೃಷ್ಟಿ, ಅಭಿವ್ಯಕ್ತಿ ಎಲ್ಲದರಲ್ಲಿಯೂ ನವೋದಯ ಕವಿಯಾಗಿಯೇ ನುಡಿದಿದ್ದಾರೆ . ಸಜ್ಜನ ಸುಸಂಸ್ಕೃತಿಯೊಂದರ ಅಭಿವ್ಯಕ್ತಿಯಾಗಿ ಇವರ ಕಾವ್ಯ ಕಾಣಿಸಿಕೊಂಡಿದೆ. ಹೀಗೆ ಕಾವ್ಯ ಕ್ಷೇತ್ರದಲ್ಲಿ ತಮ್ಮನ್ನು ಸ್ಪಷ್ಟವಾಗಿ ಗುರುತಿಸಿಕೊಂಡಿರುವ ಕವಿ ಕೆ.ಎಸ್. ನರಸಿಂಹಸ್ವಾಮಿ ಕೆಲವು ಗದ್ಯಕೃತಿಗಳು ಮತ್ತು ಭಾಷಾಂತರಗಳನ್ನು ಪ್ರಕಟಿಸಿದ್ದಾರೆ.

ಬಹುಮುಖಿ ಭಾರತೀಯ ಪರಂಪರೆಯ ಶ್ರೇಷ್ಠತೆಯನ್ನು ಸ್ವೀಕರಿಸುತ್ತಲೆ ಕಾವ್ಯ ಸ್ವಂತಿಕೆಯನ್ನು ಮೆರೆದಿರುವ ದ.ರಾ.ಬೇಂದ್ರೆ ಮತ್ತು ಕೆ.ಎಸ್.ನರಸಿಂಹಸ್ವಾಮಿರವರ ದಾಂಪತ್ಯ ಗೀತೆಗಳನ್ನು ಕುರಿತು ತೌಲನಿಕವಾಗಿ ಅಧ್ಯಯನ ಮಾಡುವುದು ಪ್ರಸ್ತುತ ನಿಬಂಧದ ಮುಖ್ಯ ಉದ್ದೇಶ.

ನಮ್ಮ ಸಂಸ್ಕೃತಿಯ ಸೂಕ್ಷ್ಮಗಳನ್ನು ಸಂವೇದನೆಯ ವಿಶಿಷ್ಟತೆಯನ್ನು ಪ್ರತಿಬಿಂಬಿಸುವ ದಾಂಪತ್ಯ ಗೀತೆಗಳು ಕನ್ನಡ ಕಾವ್ಯ ಪರಂಪರೆಯಲ್ಲಿ ರಾಧಕೃಷ್ಣರ ಕಲ್ಪನೆಯಲ್ಲಿ ಅತ್ಯುದಾತ್ತವಾಗಿ ಚಿತ್ರಿತವಾಗಿತ್ತು. ನಂತರ ಕಾಲಮಾನ ಬದಲಾದಂತೆ ಕಲಾಮಾನದಲ್ಲಿಯೂ ಬೆಳವಣಿಗೆಯಾಗಿ ಆಧುನಿಕ ಕಾವ್ಯ ಪರಂಪರೆಯಲ್ಲಿನ ದಾಂಪತ್ಯ ಜನಸಾಮಾನ್ಯರ ದಾಂಪತ್ಯ ಕಲ್ಪನೆಯಲ್ಲಿ ಮೂಡಿಬಂದಿರುವುದನ್ನು ಕಾಣುತ್ತೇವೆ. ದ.ರಾ.ಬೇಂದ್ರ ಮತ್ತು ಕೆ.ಎಸ್.ನ. ರವರ ದಾಂಪತ್ಯ ಕಾವ್ಯ ಇದಕ್ಕೆ ಹೊರತಾದವಲ್ಲ. ಇವರ ದಾಂಪತ್ಯ ಪರಿಕಲ್ಪನೆ ಜನಸಾಮಾನ್ಯರಿಗೆ ಹತ್ತಿರವಾದುದಾಗಿದೆ.

ಆಧುನಿಕ ಕಾಲದಲ್ಲಿ ವೈವಾಹಿಕ ಮತ್ತು ಕೌಟುಂಬಿಕ ವ್ಯವಸ್ಥೆಗಳು ಸಡಿಲಗೊಳ್ಳುತ್ತಿರುವ ಅಥವಾ ಸಂಕೀರ್ಣಗೊಳ್ಳುತ್ತಿರುವ ಇಂದಿನ ವ್ಯವಸ್ಥೆಗೆ ಇಂತಹ ಕಾವ್ಯ ತುಂಬಾಹಳೆಯದರಂತೆ ತೋರಬಹುದು.

ಆದರೆ ಇದರ ತಿಳುವಳಿಕೆ ತುಂಬಾ ಅವಶ್ಯಕವಾದುದು. ಈ ನಿಟ್ಟಿನಲ್ಲಿ ಇಂತಹ ದಾಂಪತ್ಯ ಕಾವ್ಯವನ್ನು ಪುನರಾವಲೋಕಿಸುವುದರಿಂದ ನಮ್ಮ ಸಂಸ್ಕೃತಿ ಮತ್ತು ಅಂದಿನ ಸಾಮಾಜಿಕ ಪರಿಸರವನ್ನು ಅಧ್ಯಯನ ಮಾಡಿದ್ದಂತಾಗುತ್ತದೆ.

ದಾಂಪತ್ಯ ಎನ್ನುವುದು ಬಹುಕಾಲ ಬಾಳುವ ಸ್ಥಿತಿಯಲಿಲ್ಲ ಇವತ್ತಿನ ಆಧುನಿಕ ನಾಗರೀಕತೆ ದಾಂಪತ್ಯದ ಬದುಕಿನ ಮೇಲೆ ವ್ಯತಿರಿಕ್ತ ಪರಿಣಾಮವನ್ನು ಬೀರುತ್ತಿದೆ. ಕೂಡಿಬಾಳುವುದಕ್ಕಿಂತ ಇಂದು ಹೆಚ್ಚಾಗಿ ವಿಘಟನೆಯತ್ತ ಮುಖ ಮಾಡುತ್ತಿದೆ. ಇವತ್ತಿನ ಸಾಮಾಜಿಕ ಸಮಸ್ಯೆಗಳಲ್ಲಿ ಸಾಂಸಾರಿಕ ವಿಘಟನೆಯೂ ಕೂಡ ಒಂದು. ಹಾಗಾಗಿ ಇವತ್ತಿನ ಪ್ರಸ್ತುತದ ಜೊತೆಗೆ ನೆನ್ನೆಯ ಮಧುರದಾಂಪತ್ಯದ ಅನುಭವಗಳನ್ನು ಮೆಲುಕು ಹಾಕುವಾಗ ದಾಂಪತ್ಯದ ಮಹೋನ್ನತಿಯ ಅರಿವುಂಟಾಗುತ್ತದೆ.

ದಾಂಪತ್ಯ ಕೇವಲ ಭೋಗಿಸುವುದಷ್ಟೇ ಅದರ ಗುರಿಯಲ್ಲ ಸಹಕಾರ, ಸಹಬಾಳ್ವೆ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳುವ ಪರಿ, ಇವುಗಳ ಮೂಲಕ ಸಮಾಜದ ಸಾಂಸ್ಕೃತಿಕ ಅನನ್ಯತೆಗೆ ಮೆರುಗನ್ನು ತಂದುಕೊಡುವಂತಹ ಹೊಣೆಗಾರಿಕೆಯೂ ಕೂಡ ದಾಂಪತ್ಯಗೀತೆಗಳದಾಗಿತ್ತು. ಹಾಗಾಗಿ ಇದು ವ್ಯಷ್ಟಿ ಅನುಭವವಾದರು ಸಹ ಸಮುದಾಯದ ಭಾವೈಕ್ಯತೆಯನ್ನು ಕೂಡ ಒಳಗೊಂಡುದುದಾಗಿತ್ತು.

ದಾಂಪತ್ಯಗೀತೆಗಳಿಗೆ ಕನ್ನಡಸಾಹಿತ್ಯದಲ್ಲಿ ತನ್ನದೆ ಆದ ಇತಿಹಾಸವಿದೆ. ಜನಪದ ಗೀತೆಗಳಲ್ಲಿ ಕನ್ನಡ ಕಾವ್ಯಗಳಲ್ಲಿ, ವಚನಗಳಲ್ಲಿ, ಕೀರ್ತನೆಗಳಲ್ಲಿ ಇದರ ಸೊಗಸನ್ನು ಕಾಣಬಹುದಾಗಿದೆ. ಜನಪದಸಾಗರದಲ್ಲಿ ಸಿಗುವ ಒಂದು ಉದಾಹರಣೆ ಇದು ಇಂತಹ ಹಲವು ಉದಾಹರಣೆಯನ್ನು ನಾವು ಜನಪದ ಸಾಹಿತ್ಯದಲ್ಲಿ ಕಾಣಬಹುದು.

೧. ನಕ್ಕರೆ ನಗಲೇಳು ನಗೆಮೊಗದ
ಕೇದಾಗಿ ನಾನು ಮುಟ್ಟಿ ಮುಡಿದ ಹೂ
ಅವಳೊಂದು ಗಳಿಗೆ ಮುಡಿಯಲಿ

೨. ಅಂಗಿ ಮೇಲೆ ಅಂಗಿ ಚೇಂದೇನು ನನ್ನ ರಾಯ
ರಂಭೆ ಮೇಲೆ ಪ್ರತಿ ರಂಭೆ ತಂದಾರೆ........

ಬೀದಿ ಮನೆಯ ಗರತಿಯೊಬ್ಬಳು ನೆರಮನೆಯ ಗರತಿಯೊಡನೆ ನಕ್ಕು ಮಾತನಾಡುತ್ತಿದ್ದಾಗ ಇವರ ನಗುವನ್ನು ಹಾಗೂ ಇವರ ದಾಂಪತ್ಯದ ಅನ್ಯೋನ್ಯತೆಯನ್ನು ಕಂಡು ಸಹಿತ ಹೆಣ್ಣುಮಗಳು ಇವಳಿಗೆ ಆಕೆಯ ಗಂಡ ಮತ್ತೊಬ್ಬಳೊಡನೆ ಅನ್ಯೋನ್ಯತೆಯಿಂದ ಇರುವ ವಿಚಾರವನ್ನು ತಿಳಿಸಿದಾಗಲೂ ಸಹ ಆಕೆ ಸಿಟ್ಟುಗೊಳ್ಳದೆ ತನ್ನ ಕುಟುಂಬದ ಈ ಗುಟ್ಟನ್ನು ಹಾದಿರಂಪಮಾಡದೇ ಸೂಕ್ಷ್ಮವಾಗಿ ಅವಳಿಗೆ ತಿರುಗೇಟು ನೀಡುವ ಧ್ವನಿಯನ್ನು ಇಲ್ಲಿ ನೋಡಬಹುದು. ಆದರೂ ಸಹ ಅವಳಿಗೆ ತನ್ನ ಗಂಡನನ್ನ ಮತ್ತೊಬ್ಬಳ ಜೊತೆ ಹಂಚಿಕೊಳ್ಳಲಾಗದ ಅಸಹನೀಯತೆಯಿದೆ. ಆದರೆ ಇದನ್ನು ಆಕೆ ಹೇಳುವ ಕ್ರಮ ದಾಂಪತ್ಯದ ಅನ್ಯೋನ್ಯತೆಯ ಸೊಗಸಿಗೆ ಕೋಡು ಬರುವಂತಿದೆ.

ವಚನಕಾರರಲ್ಲಿ 'ಶರಣಸತಿ ಲಿಂಗಪತಿ' ಭಾವ ಇರುವುದನ್ನು ನಾವು ಕಾಣುತ್ತೇವೆ ಇವು ಕೂಡ ದಾಂಪತ್ಯಗೀತೆಗೆ ಮುಖ್ಯವಾದ ದೃಷ್ಟಾಂತಗಳಾಗಿವೆ. ಕೀರ್ತನೆಗಳಲ್ಲಿ ಕೀರ್ತನಕಾರರು ತಮ್ಮನ್ನ ಭಗವಂತನಿಗೆ ಸಖಿಯಾಗಿ ಮಧುರಭಾವನೆಗಳನ್ನ ಹೊಮ್ಮುವ ರೀತಿಯಲ್ಲಿ ಬರೆದಿರುವ ಕೀರ್ತನೆಗಳು ಕೂಡ ದಾಂಪತ್ಯದ ಬಹುಮುಖ್ಯ ದೃಷ್ಟಾಂತಗಳಾಗಿವೆ.

ಈ ಎಲ್ಲದರ ಸಾರದ ರೀತಿಯಲ್ಲಿ ಕುವೆಂಪು, ಬೇಂದ್ರೆ, ಕೆ.ಎಸ್.ನ ರವರ ಕಾವ್ಯಗಳಲ್ಲಿ ದಾಂಪತ್ಯ ಗೀತೆಗಳು ಪಡಿಮೂಡಿವೆ.

ಹೊಸಗನ್ನಡಸಾಹಿತ್ಯದ ಆರಂಭ ಕಾಲದಲ್ಲಿ ತೀಕ್ಷ್ಣಭಾವ ತೀವ್ರತೆ ಮಾನವೀಯ ಅಂತಃಕರಣ ಪ್ರತಿಭಾಮೂಷೆಯಲ್ಲಿ ಕರಗಿ ಭಾವನಾತ್ಮಕ ನೆಲೆಗಟ್ಟಿನಲ್ಲಿ ಮೂಡಿಬಂದದ್ದು ಕೆಲವೇ ಕೆಲವು ಕವಿಗಳಲ್ಲಿ ಮಾತ್ರ. ಈ ಹಿನ್ನೆಲೆಯ ಪ್ರಮುಖ ಪ್ರವರ್ತಕರಲ್ಲಿ ಬೇಂದ್ರೆ ಕೂಡ ಒಬ್ಬರು ಸಾಮಾನ್ಯರ ಸಾಂಸಾರಿಕ ಹಾಗೂ ಸಾಂಸ್ಕೃತಿಕ ಬದುಕೆ ಅವರ ಕಾವ್ಯದ ಜೀವಾಳ ಜನಪದರ ಅನನ್ಯತೆ ಹಾಗೂ ಅನುಪಮವಾದ ದಾಂಪತ್ಯದ ಅನುಭಾವಿಕ ಸಂಪತ್ತು ಕಲಾತ್ಮಕವಾಗಿ ಮೂಡಿ ಸಹೃದಯ ಓದುಗರನ್ನು ಹಿಡಿದು ನಿಲ್ಲಿಸುತ್ತದೆ. ಕಾವ್ಯವೇ ಜೀವನವಾದಾಗ ವಸ್ತು ನಿಷ್ಠತೆ ಗ್ರಹಿಕೆಯ ಪ್ರಮಾಣ ಕಡಿಮೆ ಜೀವನದಲ್ಲಿ ಕಾವ್ಯಪ್ರವಹಿಸಿದಾಗ ಅದರ ತಾಜಾತನ ಮತ್ತು ಗಟ್ಟಿತನ ಅಧಿಕ. ಬೇಂದ್ರೆಯವರ ಅಸಾಧಾರಣ ಪ್ರತಿಭೆ ನೆರೆಯುವುದೆ ಕಾವ್ಯದಲ್ಲಿ. ಕಾವ್ಯ ಪ್ರವಹಿಸಿದಾಗ ನಾಟಕ, ಸಣ್ಣಕಥೆ, ವಿಮರ್ಶೆ, ಸಂಶೋಧನೆ, ಅನುವಾದ, ಮೊದಲಾದ ಪ್ರಕಾರಗಳಲ್ಲಿಯೂ ಅವರು ಕೈಯಾಡಿಸಿದ್ದಾರೆ. ಅಂದರೆ ಬದುಕನ್ನು ಎಲ್ಲಾ ಕೋನಗಳಿಂದಲೂ ಗ್ರಹಿಸುವ ಕವಿಶಕ್ತಿ ಅವರಲ್ಲಿತ್ತು.

ಜನಪದ ಲಯ ಕಾವ್ಯದೊಳಗೆ ಪ್ರಜ್ಞಾಪೂರ್ವಕವಾಗಿ ಪ್ರವೇಶಿಸಿ ಕವನಗಳಿಗೆ ವಿಶೇಷ ಮೆರಗು ತಂದುಕೊಟ್ಟಿದೆ. ವಸ್ತು ಹಾಗೂ ಧೋರಣೆ ಉತ್ತರ ಕರ್ನಾಟಕದ ಗ್ರಾಮೀಣ ಸೊಗಡಿನ ಜೊತೆ ಬೆರತು ಕಾವ್ಯಕ್ಕೆ ಹೆಚ್ಚಿನ ಮೆರಗು ನೀಡಿದೆ. ಬೇಂದ್ರೆಯವರ ಕಾವ್ಯ ವಸ್ತು, ವಿನ್ಯಾಸ, ಭಾಷೆ, ಲಯಗಳ ಜೊತೆ ಲೀಲಾಜಾಲವಾಗಿ ಪ್ರವಹಿಸಿದೆ.

ನವೋದಯ ಸಾಹಿತ್ಯ ಆರಂಭವಾದ ಕಾಲಮಾನದಲ್ಲಿ ಕಾವ್ಯ ಕೃಷಿಗೆ ತೊಡಗಿರುವ ಕವಿಗಳು ಹೆಚ್ಚಿನ ಭಾಗ ಒತ್ತು ನೀಡಿದ್ದು ಪ್ರಕೃತಿಭಾವಗಳಿಗೆ. ಗೋವಿಂದಪೈ, ಕುವೆಂಪು, ಪು.ತಿ.ನ., ಬೇಂದ್ರೆ, ಮಾಸ್ತಿ, ಕೆ.ಎಸ್.ನ. ಮುಂತಾದ ನವೋದಯ ಕವಿಗಳೆಲ್ಲರೂ ಪ್ರಕೃತಿಯನ್ನೆ ಹೆಚ್ಚು ವೈಭವಿಕರಿಸುವ ಪದ್ಯಗಳ ರಚನೆಯಲ್ಲಿ ತೊಡಗಿದರು ಇವರುಗಳು ನಡುವೆ ಪ್ರಕೃತಿಯ ಜೊತೆಗಿನ ಇತರೆ ಬದುಕು ಆಧರಣೀಯ ಅಪೇಕ್ಷಣೀಯ ಎಂದು ಬದುಕನ್ನು ವಿವಿಧ ಮೂಲಗಳಿಂದ ಅಘ್ರಣಿಸಿದವರು ವಿರಳ. ಅದರೊಳಗೆ ಬೇಂದ್ರೆ ಮತ್ತು ಕೆ.ಎಸ್.ನ. ರವರು ಪ್ರಕೃತಿ ಮತ್ತು ಇತರೆ ಬದುಕನ್ನು ಏಕಕಾಲದಲ್ಲಿ ಭಿನ್ನ ಆಯಾಮಗಳ ಮೂಲಕ ಆರ್ದ್ರತೆ ಮತ್ತು ಆಪ್ತತೆಯಿಂದ ಕೂಡಿದ ಬದುಕನ್ನು ಗಮನಿಸಿದ್ದಾರೆ ಪ್ರಕೃತಿಯ ಭಾವ ಸಾಮಾಜಿಕ ಭಾವಗಳು ಬೆರೆತಿವೆ. ಸಾಮಾಜಿಕ ಭಾವಗಳ ಮೂಲ ಸೆಲೆ ಇರುವುದೆ ಕೌಟುಂಬಿಕ ವ್ಯವಸ್ಥೆಯೊಳಗೆ ಪ್ರಕೃತಿ ದಾಂಪತ್ಯ, ಪ್ರಕೃತಿ ಮತ್ತು ಸ್ತ್ರೀಭಾವ, ಪ್ರಕೃತಿ ಮತ್ತು ಅನೌಪಚಾರಿಕ ಕುಟುಂಬ ವ್ಯವಸ್ಥೆಯೊಳಗಿನ ಬಡಿವಾರ, ಇವೆಲ್ಲವುಗಳನ್ನು ಕಾವ್ಯದ ವಸ್ತುಗಳಾಗಿ, ರೂಪಕಗಳಾಗಿ, ಪ್ರತಿಮೆಗಳಾಗಿ, ಕಾಲ್ಪನಿಕವಾಗಿ ಉಳಿಸಿಕೊಂಡಿರುವರಲ್ಲಿ ಕೆ.ಎಸ್.ನ. ರವರಿಗಿಂತಲೂ ಒಂದು ಹೆಜ್ಜೆ ಮುಂದೆ ನಡೆದವರು ಬೇಂದ್ರೆ.

ಈ ರೀತಿಯ ಭಿನ್ನಭಾವಗಳನ್ನು ನಾವು ಅಕ್ಕಮಹಾದೇವಿಯ ವಚನಗಳಲ್ಲಿ ಕಾಣಬಹುದು. ಸಂಚಿಹೊನ್ನಮ್ಮಳು ಇಂಥ ಅನ್ಯೋನ್ಯಭಾವಗಳನ್ನು ಪ್ರಕೃತಿ ಮತ್ತು ಮನುಷ್ಯನ ಸಂಬಂಧವಾಗಿ ಹಿಡಿದಿಡಲು ಸಾಧ್ಯವಾಗಲಿಲ್ಲ. ಅಂಥ ಅಮೂಲ್ಯ ಬೆಸುಗೆಯ ಕಾವ್ಯಬಂಧ ಕಾಣಿಸಿಕೊಂಡಿದ್ದು ಬೇಂದ್ರೆಯವರಲ್ಲಿ ಮಾತ್ರ ಕೆ.ಎಸ್.ನ. ರವರು ಸಾಮಾಜಿಕ ಬದುಕನ್ನು ನಗಣ್ಯಗೊಳಿಸಿದರೂ ಪ್ರೀತಿ-ಪ್ರೇಮ-ವಿರಹ-ಮಧುರ-ನೋವು-ಅಗಲಿಕೆ-ಪುನರ್ಮಿಲನಗಳ ಆವರಣದೊಳಗೆ ಸುತ್ತಾಡಿದರು. ಕೆ.ಎಸ್.ನ. ಭಾವದೀಪ್ತಿ ಪ್ರಖರಗೊಳ್ಳುವುದೆ ಇಂಥ ಪರಿದಿಯೊಳಗೆ. ಅದು ಅವರ ಅನುಭವದ ಮಿತಿ ಪ್ರಕೃತಿ ಭಾವದ ಕಡೆಗೆ ಈ ಕವಿ ಗಮನಹರಿಸಿದ್ದಾರೆ. ಶೃಂಗಾರಕಾವ್ಯದ ರಸ ತನ್ನ ಕಾವ್ಯದಲ್ಲಿ ಸೊರಗುತ್ತಿತ್ತು. ಇವರ ಕಾವ್ಯದ ಯಶಸ್ಸು ಇರುವುದೇ ಪ್ರಣಯ ಬಾಂಧವ್ಯದ ವಸ್ತುವಿನಲ್ಲಿ ಎಷ್ಟು ಮೊಗೆದರು, ಎಷ್ಟು ಅಗೆದರೂ, ದಾಂಪತ್ಯದ ಸರಸ ಸಲ್ಲಾಪಗಳು ಇನ್ನೂ ಉಳಿದಿರುವ ಸತ್ಯ ಅವರ ಕವನಗಳ ಮೂಲಕ ವೇದ್ಯ.

ನವ್ಯಕವಿಗೆ ದಾಂಪತ್ಯ ಕೊರತೆ ಕಾಣುವುದು ತನ್ನ ಏಕಾಂಗಿತನದಲ್ಲಿ ಮಾತ್ರ. ಅದೇ ನವೋದಯ ಈ ಕವಿಗಳಿಗೆ ದಾಂಪತ್ಯದ ಕೊರತೆ ನೋವು ಸುಖವೆಲ್ಲವು ಜೊತೆಯಾಗಿರುವಾಗಲೆ ಎಂದು ಕಾಣುವ ಅಂಶಗಳಾಗಿವೆ. ಬೆಂದ್ರೆಯವರ ದಾಂಪತ್ಯದ ಪ್ರಣಯದ ಉದ್ದೇಶ ನೋವನ್ನು ಸಮನಾಗಿ ಹಂಚಿಕೊಳ್ಳುವುದು ಪ್ರಣಯದ ಕ್ಷಣಗಳು ಇವರಲ್ಲಿ ವಿರಳ. ಜಂಜಾಟದ ಬದುಕನ್ನು ಪ್ರಣಯದೆಡೆಗೆ ತಿರುಗಿಸಿಕೊಳ್ಳುವ ಭಾವ ಇವರಲ್ಲಿದೆ. ಅದೇ ಕೆ.ಎಸ್.ನ. ಕವನದಲ್ಲಿನ ಭಾವನೆಗಳೆಲ್ಲಾ ಪ್ರಣಯವೇ, ಪ್ರೀತಿ-ಪ್ರಣಯ ಮೊದಲು ನಂತರ ಬದುಕು ಇಂಥ ವ್ಯಾತ್ಯಾಸಗಳು ಇಬ್ಬರು ಒಡೆದುತೊರುತ್ತವೆ ಅವುಗಳನ್ನು ಕುರಿತ ವ್ಯಾಪ್ತಿ ಮತ್ತು ಅಧ್ಯಯನದ ಉದ್ದೇಶ ಇಲ್ಲಿದೆ.

ದ.ರಾ.ಬೇಂದ್ರೆ ಮತ್ತು ಕೆ.ಎಸ್.ನರಸಿಂಹಸ್ವಾಮಿರವರ ದಾಂಪತ್ಯ ಗೀತೆಗಳ ಅಧ್ಯಯನದಲ್ಲಿ ಮೊದಲಿಗೆ ದ.ರಾ.ಬೇಂದ್ರೆ ಮತ್ತು ಕೆ.ಎಸ್. ನರಸಿಂಹಸ್ವಾಮಿಯವರನ್ನ ಪರಿಚಯಿಸಿ ನಂತರ ದಾಂಪತ್ಯ ಕಾವ್ಯದ ಸ್ವರೂಪ ಮತ್ತು ಲಕ್ಷಣಗಳನ್ನು ಕುರಿತು ವಿಚಾರ ಮಾಡಬೇಕಾಗಿದೆ. ಗಂಡು ಹೆಣ್ಣಿನ ಸಂಬಂಧ, ದಾಂಪತ್ಯದ ಕಲ್ಪನೆ ಇವುಗಳನ್ನು ಇಬ್ಬರೂ ಕವಿಗಳು ನೋಡಿರುವ ದೃಷ್ಠಿ ಮತ್ತು ಅಭಿವ್ಯಕ್ತಿಯ ವೈವಿಧ್ಯತೆಯನ್ನು ಕುರಿತು ವಿವೇಚನೆಯನ್ನು ಪ್ರಸ್ತುತ ನಿಬಂಧದ ವ್ಯಾಪ್ತಿಗೆ ಒಳಪಡಿಸಲಾಗಿದೆ.

ನಂತರದ ಭಾಗದಲ್ಲಿ ದ.ರಾ.ಬೇಂದ್ರೆ ಮತ್ತು ಕೆ.ಎಸ್.ನರಸಿಂಹಸ್ವಾಮಿರವರ ಕಾವ್ಯದಲ್ಲಿ ಕಂಡು ಬರುವುದು ಗ್ರಾಮೀಣ ಜೀವನ ವಿನ್ಯಾಸವೇ? ಅಥವಾ ನಾಗರೀಕ ಜೀವನ ವಿನ್ಯಾಸವೇ? ಎಂಬ ವಿಚಾರವಾಗಿ ಮತ್ತು ಅಲ್ಲಿ ಕಂಡು ಬರುವ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನ ಸ್ತರಗಳನ್ನು ಕುರಿತ ವಿವೇಚನೆಯನ್ನು ಈ ನಿಬಂಧದ ನಾಲ್ಕನೆಯ ಅಧ್ಯಾಯದಲ್ಲಿ ಒಳಪಡಿಸಲಾಗಿದೆ.

ನಂತರ ಐದನೇ ಅಧ್ಯಾಯದಲ್ಲಿ ಮಹಿಳಾ ಸಂವೇದನೆ ಅಥವಾ ಸ್ತ್ರೀ ಸಂವೇದನೆಯನ್ನು ಕುರಿತ ಕವಿಗಳ ದೃಷ್ಠಿ ಅಥವಾ ಅವರ ಆಶಯವೇ. ಈ ಕವಿಗಳು ಹೆಣ್ಣನ್ನು ಪುರುಷ ಪ್ರಧಾನ ದೃಷ್ಠಿಯಿಂದ ನೋಡಿದ್ದಾರೆಯೇ? ಅಥವಾ ಸ್ತ್ರೀ ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆಯೇ? ಈ ಮೂಲಕ ಸ್ತ್ರೀ ಸಮಾನತೆ ಇವರ ಕಾವ್ಯಗಳಲ್ಲಿ ಮೂಡಿ ಬಂದಿದೆಯೇ ಅಥವಾ ಇಲ್ಲವೇ ಈ ವಿಚಾರವನ್ನು ಕುರಿತು ಈ ಭಾಗದಲ್ಲಿ ವಿವೇಚಿಸಲಾಗಿದೆ.

ಭಾಷ ವೈವಿಧ್ಯತೆ ಬಹಳ ಪ್ರಮುಖವಾದುದು ಅಭಿವ್ಯಕ್ತಿ ಮಾಧ್ಯಮವಾಗಿರುವ ಭಾಷೆ ಕೆ.ಎಸ್.ನ. ಮತ್ತು ಬೇಂದ್ರೆಯವರ ಕಾವ್ಯದಲ್ಲಿ ಬಳಕೆಯಾಗಿರುವ ರೀತಿ ಆ ಮೂಲಕ ಜೀವನದ ಅಥವಾ ಸಂಸ್ಕೃತಿಯ ಅಭಿವ್ಯಕ್ತಿ ನಾಟಕೀಯತೆ, ಸಂವಾದ, ಕವಿಗಳ ಕಾವ್ಯದಲ್ಲಿ ಏಕೆ ಮೂಡಿ ಬಂದಿದೆ ಈ ಕುರಿತು ವಿವೇಚಿಸುವುದೇ ಆರನೇಯ ಅಧ್ಯಾಯದ ವಿಚಾರವಾಗಿದೆ.

ಈ ಮೇಲಿನ ಎಲ್ಲಾ ವಿಷಯಗಳ ಹಿನ್ನೆಲೆಯಲ್ಲಿ ಪ್ರಸ್ತುತ ನಿಬಂಧವನ್ನು ಮುಂದಿನ ಅಧ್ಯಾಯನಗಳಲ್ಲಿ ವಿವೇಚಿಸಲಾಗಿದೆ.

## ಕವಿಕಾವ್ಯ ಪರಿಚಯ

### ದ.ರಾ.ಬೇಂದ್ರೆ

ಆಧುನಿಕ ಕನ್ನಡ ಕಾವ್ಯದ ಮೊದಲಘಟ್ಟದ (ನವೋದಯ) ಮಹತ್ವದ ಲೇಖಕರಲ್ಲಿ ಕವಿ ದ.ರಾ. ಬೇಂದ್ರೆಯವರು ಒಬ್ಬರಾಗಿದ್ದರೆ ಇವರು ತಮ್ಮ ಅಪ್ರತಿಮ ಪ್ರತಿಭೆ ಹಾಗೂ ಅಸೀಮ ಅಭಿವ್ಯಕ್ತಿ ಸಾಮರ್ಥ್ಯಗಳಿಂದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಅಪ್ರತಿಮ ಸಾಧನೆಯನ್ನು ಮಾಡಿದ್ದಾರೆ.

ದ.ರಾ.ಬೇಂದ್ರೆಯವರು ರಾಮಚಂದ್ರಬೇಂದ್ರೆ ಮತ್ತು ಅಂಬಕ್ಕ ದಂಪತಿಗಳ ಹಿರಿಯ ಪುತ್ರರಾಗಿ ಜನವರಿ ೩೧ ೧೮೯೬ರಲ್ಲಿ ಧಾರವಾಡದಲ್ಲಿ ಜನಿಸಿದರು ೧೯೦೭ರಲ್ಲಿ ತಂದೆಯನ್ನು ಕಳೆದುಕೊಂಡ ಬೇಂದ್ರೆಯವರು ಅಜ್ಜಿ ಗೋದಾಬಾಯಿಯ ಆಶ್ರಯದಲ್ಲಿ ಬೆಳೆಯಬೇಕಾಯಿತು ತಾಯಿಯ ಆದರ್ಶ ಮಾರ್ಗದರ್ಶಗಳು ಇವರ ಬಾಳದೀವಿಯಾದವು ನಂತರ ಚಿಕ್ಕಪ್ಪನ ಪ್ರೋತ್ಸಾಹದಿಂದ ಪುಣೆಯಲ್ಲಿ ೧೯೧೪ರಲ್ಲಿ ಕಾಲೇಜು ಶಿಕ್ಷಣವನ್ನು ಆರಂಭಿಸಿ ೧೯೧೮ರಲ್ಲಿ ಬಿ.ಎ. ಪದವಿಯನ್ನು ಪಡೆದರು ೧೯೧೯ ರಲ್ಲಿ ಲಕ್ಷ್ಮಿ ಭಾಯಿರವರೊಂದಿಗೆ ವೈವಾಹಿಕ ಜೀವನಕ್ಕೆ ಕಾಲಿಟ್ಟರು. ೧೯೨೪ರಲ್ಲಿ ಬೇಂದ್ರೆಯವರಿಗೆ ಮಾತೃವಿಯೋಗ ವಾಯಿತು.

೧೯೨೬ರಲ್ಲಿ ಬೇಂದ್ರೆಯವರು ಧಾರವಾಡದಲ್ಲಿ ಗೆಳೆಯರ ಬಳಗ ಸ್ಥಾಪಿಸಿದರು ವಾಗ್ಭೂಷಣ ಸ್ವಧರ್ಮ ಮೊದಲಾದ ಪತ್ರಿಕೆಗಳು ಬಳಗದ ಮೂಲಕ ಪ್ರಕಟವಾದವು ೧೯೩೫ರಲ್ಲಿ ಎಂ.ಎ. ಪದವಿಯನ್ನು ಪಡೆದರು ಇವರ ಮೊದಲ ಕವನ ಸಂಕಲನ ಗರಿ ೧೯೩೨ರಲ್ಲಿ ಪ್ರಕಟವಾಯಿತು. ನಂತರ ಹಲವಾರು ಕವನ ಸಂಕಲನಗಳು ಪ್ರಕಟವಾದವು ನಾದಲೀಲೆ (೧೯೩೮) ಸಖೀಗೀತ (೧೯೩೭) ಮೇಘಧೂತ (೧೯೩೮) ಅರಳುಮರಳು (೧೯೫೭) ಕೃಷ್ಣಕುಮಾರಿ (೧೯೫೦) ನಾಕುತಂತಿ (೧೯೬೪) ಮೊದಲಾದ ಇವರ ಕವನ ಸಂಕಲನಗಳು ಕನ್ನಡಸಾಹಿತ್ಯ ಲೋಕವನ್ನು ಬೆಳಗಿದವು. ಕವನ ಸಂಕಲನಗಳಲ್ಲದೆ ನಾಟಕ, ಸಣ್ಣಕಥೆ, ಹರಟೆ, ಭಾಷಣ ಇವೇ ಮೊದಲಾದ ಸಾಹಿತ್ಯ ಪ್ರಕಾರಗಳಲ್ಲಿ ಅಪೂರ್ವ ಸಾಧನೆಗಳನ್ನು ಮಾಡಿದ್ದಾರೆ. ಹಲವಾರು ಭಾಷೆಯ ಕೃತಿಗಳನ್ನು ಅನುವಾದಿಸಿದ್ದಾರೆ.

ಸಾಹಿತ್ಯ ಕ್ಷೇತ್ರದ ಇವರ ಸೇವೆಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಲಭಿಸಿವೆ. ಹಲವಾರು ವಿಶ್ವವಿದ್ಯಾನಿಲಯಗಳು ಇವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಸನ್ಮಾನಿಸಿದೆ.ಇವರ ಅರಳು-ಮರಳು ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ಲಭಿಸಿದೆ. ವ್ಯಕ್ತಿ ಗುಣ ಗೌರವಕ್ಕಾಗಿ ಪದ್ಮಶ್ರೀ ಪ್ರಶಸ್ತಿ, ನಾಕುತಂತಿ ಕೃತಿಗೆ ಜ್ಞಾನಪೀಠ ಪ್ರಶಸ್ತಿ ಲಭಿಸಿದೆ.

ಕನ್ನಡ ಸಾರಸ್ವತ ಲೋಕದ ಈ ಮಿನುಗುತಾರೆ ಬೇಂದ್ರೆಯವರ ದಿವ್ಯಚೇತನ ೨೬ ೧೦ ೧೯೮೧ರಲ್ಲಿ ಮುಂಬೈಯಲ್ಲಿ ಈ ಪ್ರಾಪಂಚಿಕ ಲೋಕದಿಂದ ಮರೆಯಾಯಿತು. ತಮ್ಮ ಸಾಹಿತ್ಯ ಸೃಷ್ಟಿ, ಸಂಖ್ಯಾಪ್ರಜ್ಞೆ ಮತ್ತು ನವೋದಯ ಚಿಂತನೆಗಳಿಂದ ಸಾಹಿತ್ಯ ಲೋಕದ ಹೊಸತನದ ಸೃಷ್ಟಿಕರ್ತರಾದವರು.

ಬೇಂದ್ರೆಯವರು ಯಾವೊಂದೂ ನಿರ್ದಿಷ್ಟ ತತ್ವಕ್ಕಾಗಲೀ ಅಥವಾ ಮಾರ್ಗಕ್ಕಾಗಲೀ ಅಂಟಿಕೊಂಡವರಾಗಿರಲಿಲ್ಲ ಎಂದರೂ ಉಪನಿಷತ್ತು, ಸಂಖ್ಯ ಅನುಭಾವದ. ಅರವಿಂದರು ಪಾಶ್ಚಾತ್ಯ ಚಿಂತನಕಾರರಾದ ಎಮರ್ಸನ್ ಅವರ ವಿಚಾರಧಾರೆಗಳ ಪ್ರಭಾವಕ್ಕೆ ಅವರು ಒಳಗಾಗಿದ್ದರು. ಕನ್ನಡ ಕಾವ್ಯ ಪರಂಪರೆ ಅದರಲ್ಲೂ ನಡುಗನ್ನಡ ಭಕ್ತಕವಿಗಳನ್ನು ಹೆಚ್ಚಾಗಿ ಮೆಚ್ಚಿಕೊಂಡಿದ್ದರು. ಭಾರತೀಯ ರಸ ಸಂಪ್ರಾದಯದಲ್ಲಿ ಅತೀವ ಶ್ರದ್ಧೆಯಿರಿಸಿಕೊಂಡ ಬೇಂದ್ರೆ 'ಬ್ರಹ್ಮಾನಂದಕ್ಕಿಂತ ಕಿಂಚಿತ್ತು ಊನಕಾವ್ಯಾನಂದ ವೆಂದೇ' ನಂಬಿದರು. ಈ ದೃಷ್ಟಿಯಲ್ಲಿ ಬೇಂದ್ರೆಯವರಿಗೆ ಕಾವ್ಯ ಮತ್ತು ಜೀವನ ಬೇರೆ ಬೇರೆಯಾಗಿ ತೋರಲಿಲ್ಲ. ಬದುಕು ಎದುರಾಗುವ ರೀತಿಯಲ್ಲಿಯೇ ಪ್ರೀತಿಯಿಂದ ಸ್ವೀಕರಿಸುವ ದೃಷ್ಟಿ ಅವರದಾಗಿತ್ತು. ಹೀಗಾಗಿ ಬದುಕಿನ ಎಲ್ಲಾ ಮುಖಗಳು ಅವರ ಕಾವ್ಯದಲ್ಲಿ ಮೂರ್ತಗೊಂಡಿವೆ. ನೋವು ನಲಿವು, ಪ್ರೀತಿ, ದ್ವೇಷ, ಪ್ರೇಮ, ಕಾವ್ಯ ಒಳಗೊಂಡಿದೆ.

ಕಾವ್ಯ ಸೃಷ್ಟಿಯನ್ನು ಕಾವ್ಯಯೋಗವೆಂದು ಬೇಂದ್ರೆಯವರು ತಿಳಿಯುವುದರಿಂದ ಅದು ಪುರಷಾರ್ಥ ಸಾಧನವಾದ ಕರ್ಮಯೋಗವು ಆಗಿದೆ. ಅವರ ಪ್ರಕಾರ "ಕಾವ್ಯ ಅಮೃತಕ್ಕೆ ಹಾರುವ ಗರುಡ ಅವನ ಗರಡಿಯಲ್ಲಿ ನವೋನವ ಗಾರುಡಿಮಂತ್ರ ಒಡಮೂಡಬೇಕು. ಅವರ ಗಳಿಕೆಯಲ್ಲಿ ಶರಣಾಗುವ ಶರ-ಭಾವ ಇರುವುದು ಅಲ್ಲದೆ ಕಾವ್ಯವು ಕರ್ಮ ಅದು ಪುರುಷಾರ್ಥ ಪೂರ್ವವಾಗಲಿ ಬರಿ ಪ್ರಕೃತಿ ಮಾಸವಾಗದಿರಲಿ ಎಂಬುದೆ ಕಾವ್ಯೋದ್ಯೋಗ ಬೇಂದ್ರೆ ಕವಿಯ ಸ್ವರೂಪವನ್ನು ದೃಷ್ಟಾರ ಮತ್ತು ಸೃಷ್ಟಾರ ಎಂಬ ಎರಡು ಮುಖಗಳಲ್ಲಿ ಗುರುತಿಸಿದ್ದಾರೆ. ದೃಷ್ಟಿ ಮತ್ತು ಸೃಷ್ಟಿ ಇವೆರಡು ಕವಿ ಶಕ್ತಿಯ ಸೂಚಕಗಳು ದೃಷ್ಟಿಯಿಂದ ಶೃತಿ ಸೃಷ್ಟಿಯಿಂದ ಕೃತಿ, ಶೃತಿ ಮತ್ತು ಕೃತಿಗಳ ಐಕ್ಯವೇ ಕಾವ್ಯ"[೧] ಈ ದೃಷ್ಟಿಯ ಸಾಧನೆಗೆ "ಏಕಾಗ್ರತೆ ಅವಶ್ಯ. ಏಕಾಗ್ರತವಾದ ಮನಸ್ಸು ಮನಸ್ಸಲ್ಲ ಅದು ದಿವ್ಯದೃಷ್ಟಿ ಅದು ಋತು ತತ್ವಗಳ ಪ್ರಜ್ಞಾಲೋಕವನ್ನು ಸೇರುವುದು ಚೆಲುವು ನಲಿವುಗಳ ಬಂಡಾರನ್ನೊಡೆಯುವುದು ಆಗ ಮಾನವನು ಕವಿಯಾಗುವನು[2] ಕವಿದೃಷ್ಟಿಯಂತೆ ಸೃಷ್ಟಿ ಸಾಧ್ಯವಾದ್ದರಿಂದ ದುಷ್ಟಾರವಾಗದೆ ಕವಿ ಸೃಷ್ಟಾರನಾಗಲಾರ ಎಂಬುದು ಅವರ ಅಭಿಮತವಾಗಿತ್ತು. ಈ ಹಿನ್ನೆಲೆಯಲ್ಲಿ ಕವಿಯಾಗಿ ಬರಬೇಕಾದ ಜವಾಬ್ದಾರಿಯೇನು ಎಂಬುದನ್ನು ರವೀಂದ್ರರನ್ನು ಕುರಿತ ಗುರುದೇವ ಕವನದಲ್ಲಿ ಹೀಗೇ ವಿವರಿಸಿದ್ದಾರೆ.

ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ
ಜನಕ ಹಿಗ್ಗಿ ಹಾಡ ನೀಡಾಂವ

ದೈನಂದಿನ ಆಸರಿಕೆ ಬೇಸರಿಕೆ ಕೋಪ ತಾಪಗಳಿಗೆ ಸೋತು ಆಯಾಸವಾದ ಬೇಸರಿಕೆನಿಗಿ ಆಸರೆಯಾಗುವ ಸ್ಫೂರ್ತಿಯ ಸೆಲೆಯಾಗುವ ಹಿಗ್ಗಿನ ಹಾಡನು ಕವಿ ನೀಡಬೇಕೆಂಬುದು ಬೇಂದ್ರೆಯವರ ಆಶಯ ಆದರೆ ಲೋಕದಲ್ಲಿ ಆನಂದ ಮಾತ್ರ ಇಲ್ಲ ಅದನ್ನು ಸೃಷ್ಟಿಸಿದಾತ ಆನಂದವನ್ನು ಮಾತ್ರ ಲಕ್ಷ್ಯಕ್ಕಿರಿಸಿಕೊಂಡಿದ್ದರು ಲೋಕದಲ್ಲಿ ಆನಂದಕ್ಕಿಂತ ಮಿಗಿಲಾಗಿ ದುಃಖವೇ ತುಂಬಿಕೊಂಡಿರುವುದನ್ನು ಬೇಂದ್ರೆ ವ್ಯಕ್ತಿಯ ನೆಲೆಯಲ್ಲಿಯೂ ಅನುಭವಿಸಿದ್ದರು.

ಬಡತನ ಸಾವು, ನೋವು, ಅವರ ಕುಟುಂಬವನ್ನು ಕಾಡಿದ ರೀತಿಯಂತೂ ಕರುಣಾಜನಕ ಬದುಕಿನಲ್ಲಿ



೧. ಬೇಂದ್ರೆ ಸಾಹಿತ್ಯ ವಿರಾಟ ಸ್ವರೂಪ ೧೯೭೪ ಪುಟ ೮೪
೨. ವಾಗ್ಭೂಷಣ ೬ ೧೯೪೨ ಪುಟ ೪೪ ಉಲ್ಲೇಖ ಜಿ.ಎಸ್. ಅಮೂರ್ ಭುವನದ ಭಾಗ್ಯಪುಟ ೨೮

ಅನುಭವಿಸಿದ ಅಂಥ ಬವಣೆಗಳನ್ನು ಪಟ್ಟಪಾಡುಗಳನ್ನು ಪಾಡುಗಳಾಗಿಯೇ ಸಹೃದಯನಿಗೆ ವರ್ಗಾಯಿಸಲು ಅವರ ಕವಿ ಹೃದಯ ಒಪ್ಪಲಿಲ್ಲ ಬದಲಿಗೆ ಪಾಡನ್ನು ಹಾಡಾಗಿ ಮಾರ್ಪಡಿಸುವ ಗಾರುಡಿಗರಾಗಿ ಬೇಂದ್ರೆ ಕಾವ್ಯ ಕವಿಸೃಷ್ಟಿಗೆ ಇಳಿಯುತ್ತಾರೆ.

ಪಟ್ಟಪಾಡೆಲ್ಲವು ಹುಟ್ಟು ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿದೆ

ಅಷ್ಟೆ ಅಲ್ಲದೆ,

**ಎನ್ನಪಾಡೆನಗಿರಲಿ ಅದರ ಹಾಡನ್ನಷ್ಟೆ**
**ನೀಡುವೆನು ರಸಿಕ ನಿನಗೆ**
**ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ**
**ಆ ಸವಿಯನಷ್ಟೆ ಹಣಸು ನನಗೆ**

ಎಂದು ಕವಿ ಅಭಿಪ್ರಾಯ ಪಡುತ್ತಾರೆ.

ಕಾವ್ಯ ಕುರಿತು ಇಂಥ ಧೋರಣೆ ತಳೆದಿದ್ದರಿಂದ ಬೇಂದ್ರೆ ತಮ್ಮ ವ್ಯಕ್ತಿ ಬದುಕಿನಲ್ಲಿ ಅನುಭವಿಸಿದ ಸಾವು ನೋವು ಕಷ್ಟ ಕೋಟಲೆಗಳನ್ನು ಲೋಕಾನುಭವಗಳಾಗಿ ಮಾರ್ಪಡಿಸುತ್ತಾರೆ. ಆತ್ಮನಿಷ್ಠವಾದ ಅನುಭವವನ್ನು ವಸ್ತು ನಿಷ್ಠವಾಗಿಸುವುದು ವ್ಯಕ್ತಿ ಕೇಂದ್ರದಿಂದ ವ್ಯಕ್ತ್ಯಾತೀತತೆಗೆ ತುಡಿಯುವುದೇ ಬೇಂದ್ರೆ ಕಾವ್ಯದ ಮುಖ್ಯ ಲಕ್ಷಣವೂ ಹೌದು ಮೊದಲ ಮಗು ಕ್ಷೇಮೇಂದ್ರ ತೀರಿಕೊಂಡಾಗ ಮನದ ತಾಪ ಬೇಗುದಿಗಳನ್ನು ಸಹಜ ನೆಲೆಯಲ್ಲಿ ದಾಖಲಿಸುವುದರೊಂದಿಗೆ ಅದು ಸಾಧಾರಣೀಕರಣಕ್ಕೆ ಒಳಗಾಗುವುದು ಹೀಗೆ.

ನಿಮಿತ್ತ ಮಾತ್ರ ಕ್ಷಣಿಕವಾಗಿ ಬಂದ ಕೂಸೆ
ಸಂಸಾರದ ಸವಿ ಸುಖ ದುಃಖದ
ಸರಿ ಬೆರಕೆಯೊಂದು ಕಲಿಸಿದೆ

ಪಾಡನ್ನು ಹಾಡಾಗಿಸಿ ಅಳುವನ್ನು ನಗುವಾಗಿ ಸ್ವೀಕರಿಸುವ ಈ ಧೋರಣೆ ಗಮನಾರ್ಹವಾದುದು. ಆದರೆ ಬೇಂದ್ರೆ ಕಾವ್ಯ ಇಷ್ಟಕ್ಕೆ ವಿರಮಿಸುವುದಿಲ್ಲ. ಮನುಷ್ಯ ಬದುಕಿನ ನೆಮ್ಮದಿಯನ್ನು ಹಾಳುಗೆಡುವ ದುಷ್ಟಶಕ್ತಿಯನ್ನು ಅನಾವರಣಗೊಳಿಸುವ ನಿಟ್ಟಿನಲ್ಲೂ ಮುಂದುವರಿದಿದೆ. 'ಚಿಗರಿಕಂಗಳ ಚೆಲುವೆ' ಕವಿತೆಯಲ್ಲಿ ಭೂಮಿಯ ಸಂತ್ರಸ್ಥ ಸ್ಥಿತಿಗೆ ಕಾರಣವಾಗುವ ಹಾಡೆ ಹಗಲು ನಡೆಯುವ ಜೀವನದ ಬೇಟೆಯ ಚಿತ್ರವಿದೆ. ಇವರ ಮತ್ತೊಂದು ಕವನ 'ತುತ್ತೀನ ಚೀಲ' ಹಸಿವಿನ ಪ್ರಶ್ನೆಯನ್ನು ವಾಸ್ತವ ನೆಲೆಯಲ್ಲಿ ಎತ್ತಿಕೊಂಡಿರುವ ಕವಿತೆಯಾಗಿದೆ. ಕುರುಡು ಕಾಂಚಣದಲ್ಲಿ ಉಳ್ಳವರು ಮತ್ತು ಇಲ್ಲದವರ ನಡುವಿನ ಸಂಘರ್ಷದ ಚಿತ್ರಣವನ್ನು ಕೊಡುತ್ತಾರೆ.

ಹ್ಯಾಂಗಾರ ಕುಣಿಕುಣಿದು
ಮಂಗಾಟ ನಡೆದಾಗ
ಅಂಗಾತ ಬಿತ್ತೋ ಹೆಗಲಲ್ಲಿ ಎತ್ತೋ

ಉಳ್ಳವರು ಒಂದಲ್ಲ ಒಂದು ದಿನ ದುರಂತ ಸ್ಥಿತಿಯನ್ನು ತಲುಪುತ್ತಾರೆ ಎಂಬ ಧೋರಣೆಗೆ ಕವಿತೆ ಸಾಕ್ಷಿಯಾಗಿದೆ. ಬೇಂದ್ರೆಯವರ ಒಟ್ಟು ಕವಿದನಿ ಬಡವರ ಪರವಾಗಿ ಆಗಿರುವುದು ನಿಜ ಬಡವರನ್ನು ಸುತ್ತುವರಿದಿರುವ ಸಮಸ್ಯೆಗಳ ಆಳಕ್ಕೆ ಇಳಿದು ಅದರಿಂದ ಬಿಡುಗಡೆಗೊಳ್ಳಲು ಬೇಕಾದ ಸಾಧ್ಯತೆಗಳ ಕುರಿತು ಬೇಂದ್ರೆ ಕಾವ್ಯ ಏನನ್ನೂ ಹೇಳುವುದಿಲ್ಲ ಇದು ಕಾವ್ಯದ ಮಿತಿ.

ಬೇಂದ್ರೆ ಕಾವ್ಯದ ಮೂಲ ಬೇರುಗಳನ್ನು ಶೋಧಿಸಲು ಪ್ರಯತ್ನಿಸುವಾಗ ಈ ಕುರಿತು ಸ್ವತಃ ಬೇಂದ್ರೆಯವರೇ ಹೇಳಿದ ಎರಡು ಅಭಿಪ್ರಾಯಗಳನ್ನು ಗಮನಿಸಬೇಕಾಗುತ್ತದೆ.

೧. "ಸೃಜನದ ಮೂಡು ಒಂದು ಗುಂಗು ಅದರ ನಾದ ಲಹರಿಯಲ್ಲಿ ಮಂತ್ರವು ಗುಪ್ತವಾಗಿರುತ್ತದೆ. ಅದರ ಶೃತಿಯಲ್ಲಿಯೂ ರೂಪ ಸಂಕೇತಗಳು ಮಿಂಚಿ ಮಾಯವಾಗುತ್ತದೆ. ಅದರ ನೃತ್ಯ, ನಾಟಕ ಹೃದಯವನ್ನು ಆಂದೋಲಿಸುವುದು ಮುದ್ರೆ ಅರ್ಥ ಪಿಂಡವಾಗಿ ಶಬ್ದಗಳೊಡನೆ ಸಹಜ ಜೀವನ ಮಾಡುವುದು ಆಗ ಅನುಭೂತದಲ್ಲಿ ಅನುಭವ ಗೊಂಡು ವೈಖರಿಯ ತಂತಿ ಮೃದಂಗ ಸೊಲ್ಲುಗೊಡುವುದು. ಆ ಭಾವೋತ್ಥಾನದಲ್ಲಿ ರಚನೆ ಕ್ರಮಗೊಳ್ಳುವುದು ಲೇಖನಕ್ಕೂ ಪ್ರೇರೇಪಿಸುವುದು"[೧]

೨. "ಕಾವ್ಯ ಭಾವದ ದರ್ಶನ ಸುಷುಪ್ತಿಯು ಅಭಾವ ಸ್ಥಿತಿಯಲ್ಲ ಅದೃಶ್ಯ ಆದರ್ಶನ ಸ್ಥಿತಿ; ಅಂತಯೇ ಅದಕ್ಕೆ ಎಚ್ಚರವಿದೆ. ಎಚ್ಚರಕ್ಕೆ ಅರ್ಥಭಾವ: ಸ್ವಪ್ನಕ್ಕೆ ತೇಜದ ಸುದ್ದಿ: ಸುಷುಪ್ತಿಗೆ ಎಚ್ಚರದ ಹಾದಿ ತೋರಿಸುವ ಈ ಸಾಕ್ಷಿಕ ಗುರು, ತುರೀಯ: ನಾಲ್ಕನೇಯವ ಚತುರ ತೂರ್ಯ ತುತ್ತೂರಿ ಊದಿಕವಿಯ ಸದ್ಭಾವಕ್ಕೆ ಜಾಗಾರಾಭ್ಯಾಸ ಮಾಡುತ್ತಾನೆ. ಆತ ಅವನ ಭಾವದ ತಂತಿ ಮಿಡಿದಾಗ ಶಬ್ದ-ಅರ್ಥ-ಸಂಕೇತ ಅದರ ಕೇಂದ್ರಿಕರಣ ಕೃತಿಗೆ ಆಕೃತಿ ತಾಳುತ್ತದೆ"[೨]

ಬೇಂದ್ರೆ ಆಳುವ ವರ್ಗದ ಪರವಾಗಿ ಕಾವ್ಯ ರಚಿಸಿದರು ಎಂಬುದಕ್ಕಿಂತ ಆಳುವವರು ಸೃಷ್ಟಿಸಿದ ಅಂಥ ತತ್ವಜ್ಞಾನದ ಮೂಲವನ್ನು ಅರಿಯಲಿಲ್ಲವೆಂಬುದೇ ಮಹತ್ವದ ವಿಷಯವಾಗಿದೆ. ಕಿತ್ತು ತಿನ್ನುವ ಬಡತನ, ಅಲೆಮಾರಿ ಬದುಕು, ಕುಟುಂಬ ಸಂಕಷ್ಟಗಳು, ಸಾವು ನೋವು ಇವೆಲ್ಲವನ್ನು ಆಧ್ಯಾತ್ಮದ ನೆಲೆಯಲ್ಲಿಯೇ ಅರ್ಥೈಸುವ ನಿಟ್ಟಿನಲ್ಲಿ ಬೇಂದ್ರೆ ಮುಂದುವರಿದರು ಇಷ್ಟಾಗಿಯೂ ಬೇಂದ್ರೆ ಸಮಷ್ಠಿ ಬದುಕಿನ ಬಗೆಗೆ ಕಾಳಜಿವುಳ್ಳವರಾಗಿದ್ದರು.

ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಡಿಗಾಳಿಯಂತೆ

ಎಂಬುದು ಅವರ ಬದುಕಿನ ಧ್ಯೆಯವಾಗಿತ್ತು. ಆದರೆ ಸಮಾಜದಲ್ಲಿ ಬಹುಪಾಲು ಜನರನ್ನು ಆವರಿಸಿರುವ ಅಜ್ಞಾನ, ಬಡತನ, ಲಿಂಗ, ಮತ್ತು ಜಾತಿ ಆಧಾರಿತ ಅಸಮಾನತೆಗಳನ್ನು ಭೌದ್ಧಿಕ ನೆಲೆಯಲ್ಲಿ ಶೋಧಿಸಲು ಬೇಂದ್ರೆಯವರಿಗೆ ಸಾಧ್ಯವಾಗಲಿಲ್ಲ.

ಇವೇನೆ ಮಿತಿಗಳಿದ್ದರೂ ಬೇಂದ್ರೆ ಸಹಜ/ಪ್ರತಿಭಾಪೂರ್ಣ ಕವಿ ಎಂಬುದರಲ್ಲಿ ಎರಡು ಮಾತಿಲ್ಲ ಅಳುನುಂಗಿ ನಗು ಹಂಚಿದ ಅಸಾಧಾರಣ ವ್ಯಕ್ತಿ ಆತ ಕಾವ್ಯ ಶರೀರ ನಿರ್ಮಾಣದಲ್ಲಿ ಬೇಂದ್ರೆ ತೋರಿದ



೧. ಸಾಹಿತ್ಯ ವಿರಾಟ ಸ್ವರೂಪ ಪುಟ ೬೦
೨. ಸಾಹಿತ್ಯ ವಿರಾಟ ಸ್ವರೂಪ ಪುಟ ೫೬-೫೭

ಪ್ರಯೋಗಶೀಲತೆಯಂತೂ ಸಾಧಕನ ಬದುಕಿಗೆ ಅನುರೂಪಿಯಾದುದು ಸ್ವಚ್ಛಂದತೆ ಇದ್ದರೆ ಛಂದಸ್ಸು ಎಂಬುದು ಇವರ ನಿಲುವು. ತ್ರಿಪದಿ, ಲಾವಣಿ, ಹಾಡು, ಭಾವಗೀತೆ, ಗೀತೆಯ ನಾನಾ ಪ್ರಕಾರಗಳು, ಜನಪದ ಮಟ್ಟುಗಳು ಲಯ, ಧಾಟಿಗಳು ಬೇಂದ್ರೆ ಕಾವ್ಯದಲ್ಲಿ ತಾನೇ ತಾನಾಗಿ ಸೇರಿ ಹೋಗಿದೆ. 'ಬಾಳಿನಲ್ಲಿ ಬೆಂದರೆ ಬೇಂದ್ರೆ ಆದಾನು' ಎಂಬುದು ಅವರ ವ್ಯಕ್ತಿತ್ವಕ್ಕೆ ಒಪ್ಪುವಮಾತೆ, ಸರಳ ನೇರ ನುಡಿಗಳಿಂದ ಕೂಡಿದ ಮಾಗಿದ ವ್ಯಕ್ತಿತ್ವ ಇವರದು. ಒಟ್ಟಾರೆ ನುಡಿಗೆ ಗರಿಮೂಡಿಸಿ ಹಕ್ಕಿ ಹಾರಿಸಿದ ಗಾರುಡಿಗನಾತ.

**ಕೆ.ಎಸ್. ನರಸಿಂಹಸ್ವಾಮಿ**

ಇವರು ೧೯೧೫ ಜನವರಿ ೨೬ ರಂದು ಮಂಡ್ಯ ಜಿಲ್ಲೆ ಕೃಷ್ಣರಾಜಪೇಟೆಯಲ್ಲಿ ಜನಿಸಿದರು. ಇವರ ತಂದೆ ಸುಬ್ಬರಾಯರು, ತಾಯಿ ನಾಗಮ್ಮ, ಕೆ.ಎಸ್. ನರಸಿಂಹಸ್ವಾಮಿಯವರ ಶಾಲಾ ವಿದ್ಯಾಭ್ಯಾಸ ಮೈಸೂರಿನ ಪ್ರಾಕ್ಟೀಸಿಂಗ್ ಮಿಡಲ್ ಸ್ಕೂಲ್ ಮತ್ತು ಮಹಾರಾಜ ಹೈಸ್ಕೂಲ್‌ನಲ್ಲಿ ಆಗುತ್ತದೆ. ತಂದೆಯ ಅಪೇಕ್ಷೆಯ ಮೇರೆಗೆ ಮುಂದೆ ಮೈಸೂರಿನ ಇಂಟರ್‌ಮಿಡಿಯಟ್ ಕಾಲೇಜಿನಲ್ಲಿ ಫ್ರೀ ಇಂಜಿನಿಯರಿಂಗ್ ಸೇರಿಕೊಂಡು ವಿದ್ಯಾಭ್ಯಾಸ ಮುಂದುವರಿಸುತ್ತಾರೆ. ಆದರೆ ಇವರಿಗೆ ಕಲಾ ವಿಷಯದಲ್ಲಿ ಆಸಕ್ತಿ ಇದ್ದುದರಿಂದ ಬಿ.ಎ. ಪದವಿ ಪಡೆಯಲು ನಿರ್ಧರಿಸುತ್ತಾರೆ. ಇವರು ವಿಜ್ಞಾನ ವಿದ್ಯಾರ್ಥಿಯಾದ್ದುದರಿಂದ ಬಿ.ಎಂ.ಶ್ರೀ. ಯವರ ನೆರವಿನಿಂದ ಬಿ.ಎ.ಗೆ ಸೇರಬೇಕಾಯಿತು. ನಂತರ ಇವರ ವಿದ್ಯಾಭ್ಯಾಸ ಮುಂದುವರಿಯಲಿಲ್ಲ ತಂದೆಯ ಮರಣದ ಕಾರಣದಿಂದಾಗಿ ಸಂಸಾರದ ಜವಾಬ್ದಾರಿಯನ್ನು ಒತ್ತು ಕೆಲಸಕ್ಕೆ ಸೇರಿಕೊಂಡರು.

೧೯೩೬ರಲ್ಲಿ ತಿಪಟೂರಿನ ಶಿರಸ್ತೇದಾರರ ಮಗಳು ವೆಂಕಮ್ಮನವರೊಡನೆ ವಿವಾಹವಾಯಿತು. ಮೈಸೂರಿನ ನಗರಸಭಾ ಕಛೇರಿಯಲ್ಲಿ ಗುಮಾಸ್ತರಾಗಿ ಮೊದಲಿಗೆ ನೇಮಕಗೊಂಡ ಕೆ.ಎಸ್.ನ. ರವರು ಮುನಿಸ್ಸಿಪಲ್ ಮತ್ತು ಲೋಕಲ್ ಬೋರ್ಡ್ ನೇಮಕಾತಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಕೆಲಸವನ್ನು ಖಾಯಂ ಗೊಳಿಸಿಕೊಂಡರು. ನಂತರ ವಿವಿಧ ಹುದ್ದೆಗಳಿಗೆ ಬಡ್ತಿ ಪಡೆದು ಬೆಂಗಳೂರಿನ ಕಮಿಷನರ್ ಕಛೇರಿಯಲ್ಲಿ ೧೯೭೦ರ ವರೆಗೂ ಕಾರ್ಯನಿರ್ವಹಿಸಿ ನಿವೃತ್ತರಾದರೂ. ನಂತರದ ಬಿಡುವಿನ ವೇಳೆಯಲ್ಲಿ ೧೯೭೨ ರಿಂದ ೧೯೭೪ ರವರಗೆ ಕಾರ್ಯರಾಜ್ಯ ಸಾಹಿತ್ಯ ಅಕಾಡೆಮಿಯಲ್ಲಿ ಸಾಹಿತ್ಯಾಧಿಕಾರಿಯಾಗಿ ೧೯೭೪ ರಿಂದ ೧೯೭೭ ರವರಗೆ 'ಯುವ ಕರ್ನಾಟಕ' ದ ಸಂಪಾದಕರಾಗಿ ಕಾರ್ಯನಿರ್ವಹಿಸಿದರು.

ಸರಳತೆ ಕೆ.ಎಸ್.ನ. ಕಾವ್ಯದ ಲಕ್ಷಣ ನೇರ ನಡೆನುಡಿ, ಪರಿಶುದ್ಧಿ ಇವರ ವ್ಯಕ್ತಿತ್ವದ ಗುಣಗಳು. ಇವರ ಕಾವ್ಯ ಜೀವನ ವೈಯುಕ್ತಿಕ ಜೀವನದಿಂದ ಬೇರೆಯಾದುದಲ್ಲ ಎಂಬುದು ಗಮನಿಸಬೇಕಾದ ಸಂಗತಿ. ಇವರಿಗೆ ಇವರು ನಿಂತನೆಲ ಮತ್ತು ಸುತ್ತಲ ಪರಿಸರಗಳೇ ಕಾವ್ಯ ರಚನೆಗೆ ಕಾರಣವಾದವು. ಜೊತೆಗೆ ಬರ್ನ್ಸ್ ಕವಿಯ ಕವನಗಳು ಮತ್ತು ಬಿ.ಎಂ.ಶ್ರೀ ಇಂಗ್ಲೀಷ್ ಗೀತೆಗಳಿಂದಲೂ ಇವರು ಪ್ರಭಾವಿತರಾಗಿದ್ದಾರೆ. ಕೆ.ಎಸ್.ನ. ಬರೆದ ಮೊದಲ ಕನ್ನಡ ಕವಿತೆ ಎಂದರೆ 'ಕಬ್ಬಿಗನ ಕೂಗು' ಇದು ೧೯೩೩ ಜನವರಿ ೧೪ ರಲ್ಲಿ ರಚಿತವಾಗಿ ಪ್ರಬುದ್ಧ ಕರ್ನಾಟಕದಲ್ಲಿ ರಚಿತವಾಯಿತು.

ಆಧುನಿಕ ಸಾಹಿತ್ಯ ಸಂದರ್ಭದಲ್ಲಿ ಕೆ.ಎಸ್.ನ. ಹೆಚ್ಚು ಜನಪ್ರಿಯತೆಯನ್ನು ಪಡೆದ ಪ್ರಮುಖ ಕವಿಯಾಗಿದ್ದಾರೆ. ಇವರ ಕವನಗಳು ಜನ ಸಮುದಾಯದಲ್ಲಿ ಸಂತೋಷವನ್ನು ಉಂಟುಮಾಡಿವೆ. ಸುಲಭ

ಸಂವಹನ ಸಾಧ್ಯವಾಗಿದೆ. ಇವರ ಕಾವ್ಯ ಕ್ಷೇತ್ರದಲ್ಲಿನ ಸಾಧನೆ ಅನನ್ಯವಾದುದು ೧೯೪೨ರಲ್ಲಿ ಮೊದಲಿಗೆ 'ಮೈಸೂರು ಮಲ್ಲಿಗೆ' ಕವನ ಸಂಕಲನವನ್ನು ಪ್ರಕಟಿಸಿದರು ನಂತರ ಐರಾವತ (೧೯೪೫) ದೀಪದ ಮಲ್ಲಿ (೧೯೪೭) ಉಂಗುರ (೧೯೪೯) ಇರುವಂತಿಗೆ (೧೯೫೨) ಶಿಲಾಲತೆ (೧೯೫೮) ಮನೆಯಿಂದ ಮನೆಗೆ (೧೯೬೦) ಮುಂತಾದ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಈ ಏಳು ಸಂಕಲನಗಳಲ್ಲಿ ಹೂವಿನ ಸಂಪರ್ಕವಿದ್ದು ಬದುಕಿನ ಮೃದು ಭಾವಗಳೇ ಮೇಲುಗೈ ಪಡೆದಿರುವುದನ್ನು ಕಾಣುತ್ತೇವೆ. 'ಮನೆಯಿಂದ ಮನೆಗೆ' ಪ್ರಕಟವಾದ ಮೇಲೆ ಸುಮಾರು ೧೭ ವರ್ಷಗಳ ಕಾಲ ಯಾವುದೇ ಸಂಗ್ರಹವನ್ನು ಪ್ರಕಟಿಸಲಿಲ್ಲ. ಈ ಅವಧಿಯನ್ನು ಅವರು 'ಚಿಂತನೆಯ ಕಾಲ' ಎಂದು ಕರೆದುಕೊಂಡಿದ್ದಾರೆ ನಂತರ ಹೊಸ ಚಿಂತನೆಯ ಫಲವಾಗಿ ೧೯೭೭ ರಲ್ಲಿ 'ತೆರೆದ ಬಾಗಿಲು' ಕವನ ಸಂಕಲನ ಪ್ರಕಟವಾಯಿತು. ಇದಾದ ಮೇಲೆ 'ನವಪಲ್ಲವ' 'ದುಂಡುಮಲ್ಲಿಗೆ' 'ನವಿಲದನಿ' ಮುಂತಾದ ಕೃತಿಗಳು ಪ್ರಕಟವಾಯಿತು. ಇವುಗಳಲ್ಲಿ 'ಶಿಲಾಲತೆ' 'ಮನೆಯಿಂದ ಮನೆಗೆ' 'ತೆರೆದಬಾಗಿಲು' ಈ ಮೂರು ಸಂಕಲನಗಳನ್ನು ಹೊರತುಪಡಿಸಿ ಉಳಿದೆಲ್ಲ ಸಂಕಲನಗಳು ಪುಷ್ಪಪ್ರೀತಿ ಸಾದೃಶ್ಯವನ್ನು ಹೊತ್ತಿವೆ.

ಕೆ.ಎಸ್.ನ.ರವರು ಕಾವ್ಯ ಪ್ರಕಾರದಲ್ಲಷ್ಟೆ ಅಲ್ಲದೇ ಉಳಿದ ಪ್ರಕಾರಗಳಲ್ಲಿಯೂ ಕೆಲಸ ಮಾಡಿದ್ದಾರೆ. ಮುಖ್ಯವಾಗಿ ಕಥೆ, ವಿಮರ್ಶೆ ಮತ್ತು ಅನುವಾದಕ್ಕೆ ಸಂಬಂಧಿಸಿದಂತೆ ಕೃತಿಗಳನ್ನು ಪ್ರಕಟಿಸಿದ್ದಾರೆ ಇವು ಬಹುತೇಕ ಗದ್ಯ ಕೃತಿಗಳು. ಕೆಲವು ಭಾಷಾಂತರ ಗ್ರಂಥಗಳು ಇವೆ, ಈ ಕುರಿತು ಒಟ್ಟು ೧೪ ಕೃತಿಗಳನ್ನು ಪ್ರಕಟಿಸಿದ್ದು ಸಾಕಷ್ಟು ವೈವಿಧ್ಯ ಪೂರ್ಣವಾಗಿವೆ. ಅನುವಾದ ಕೆ.ಎಸ್.ನ ರವರ ಮುಖ್ಯ ಆಸಕ್ತಿ ಅಲ್ಲದಿದ್ದರೂ ಅದರಲ್ಲಿಯೂ ಗಮನಾರ್ಹ ಕೆಲಸ ಮಾಡಿದ್ದಾರೆ. ಅನುವಾದದ ನಂತರ ಸ್ವಂತ ಬರವಣಿಗೆ ಆರಂಭಿಸಿ ಎಂಬುದು ಇವರ ಕರೆಯಾಗಿತ್ತು.

ಕೆ.ಎಸ್.ನ. ಕಾವ್ಯ ಸಾಧನೆಗೆ ಅಪಾರ ಜನ್ನಮನ್ನಣೆಯನ್ನು ಪಡೆದುಕೊಂಡರು. ಹಲವು ಪ್ರಶಸ್ತಿ ಪುರಸ್ಕಾರಗಳು ದೊರೆತವು. ೧೯೪೫ರಷ್ಟೆ ಹಿಂದೆಯೇ ಅವರ 'ಮೈಸೂರು ಮಲ್ಲಿಗೆ' ಕವನ ಸಂಕಲನಕ್ಕೆ ದೇವರಾಜ್ ಬಹುದ್ದೂರ್ ಬಹುಮಾನ ದೊರೆತಿದೆ. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ಮತ್ತು ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿಗಳು ಕ್ರಮವಾಗಿ ೧೯೫೨ ಮತ್ತು ೧೯೮೭ ರಲ್ಲಿ ಪ್ರಾಪ್ತವಾಯಿತು. ೧೯೮೪ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಗೌರವ ಫೆಲೋಶಿಪ್, ೧೯೯೯ರಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯ ಗೌರವ ಫೇಲೋಶಿಪ್‌ಗಳು ತೊರೆತಿದೆ. ೬೦ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಅಧ್ಯಕ್ಷತೆಯ ಗೌರವಕ್ಕೆ ಪಾತ್ರರಾಗಿದ್ದಾರೆ. ೧೯೯೨ರಲ್ಲಿ ಬೆಂಗಳೂರಿನ ವಿಶ್ವವಿದ್ಯಾನಿಲಯದಿಂದ ಗೌರವ 'ಡಿ.ಲಿಟ್' ಪದವಿ ಹಾಗೂ ೧೯೯೨ರಲ್ಲಿ ಕರ್ನಾಟಕ ಸರ್ಕಾರದ ಅತ್ಯುನ್ನತ ಸಾಹಿತ್ಯ ಪ್ರಶಸ್ತಿ 'ಪಂಪಪ್ರಶಸ್ತಿ' ೨೦೦೦ರಲ್ಲಿ 'ಗೊರೂರು ಸಾಹಿತ್ಯ ಪ್ರಶಸ್ತಿ' ಗಳು ಲಭಿಸಿದೆ.

ಆಧುನಿಕ ಕನ್ನಡ ಸಾಹಿತ್ಯದ ಪ್ರಮುಖ ಕವಿಗಳಲ್ಲಿ ಕೆ.ಎಸ್.ನ. ಒಬ್ಬರು ಇವರು ಪುನರುಜ್ಜೀವನ ಅಥವಾ ನವೋದಯ ಕಾಲದಲ್ಲಿ ತಮ್ಮ ಕಾವ್ಯ ರಚನೆಯನ್ನು ಆರಂಭಿಸಿ ಪ್ರಗತಿಶೀಲ ಮತ್ತು ನವ್ಯದ ಪ್ರಭಾವಕ್ಕೆ ಇವರು ಒಳಗಾಗಿ ಈ ಹಾದಿಯಲ್ಲಿ ತಮ್ಮ ಕಾವ್ಯವನ್ನು ರಚಿಸಿದರು ಮತ್ತೆ ಮೂಲ ನೆಲೆಗೆ ಬಂದು ಕಾವ್ಯವನ್ನು ರಚಿಸಿದ್ದು ಅವರ ಕಾವ್ಯ ರಚನೆಯ ಇತಿಹಾಸದಲ್ಲಿ ಮುಖ್ಯವಾದ ಅಂಶ. ಆದ ಕಾರಣ

ವಸ್ತು, ಅಭಿವ್ಯಕ್ತಿ, ದೃಷ್ಟಿ ಈ ಎಲ್ಲದರಲ್ಲಿಯೂ ನವೋದಯ ಕವಿಯಾಗಿಯೇ ಕಾಣಿಸಿಕೊಂಡಿದ್ದಾರೆ. ಸಜ್ಜನ ಸುಸಂಸ್ಕೃತ ಸಂಸ್ಕೃತಿಯೊಂದರ ಅಭಿವ್ಯಕ್ತಿಯಾಗಿ ಇವರು ಇಡೀಕಾವ್ಯದಲ್ಲಿ ಕಾಣಿಸಿಕೊಂಡಿದ್ದಾರೆ.

ನವೋದಯ ಮಾರ್ಗದಲ್ಲಿ ತಮ್ಮ ಸ್ಥಾನವನ್ನು ಸ್ಥಾಪಿಸಿಕೊಂಡು ಇವರು ನಂತರ ಪ್ರಗತಿಶೀಲ ಚಳುವಳಿಯ ನೇತಾರರು ನವೋದಯದ ಮೇಲೆ ದಾಳಿ ಮಾಡಿದಾಗ ನವೋದಯವನ್ನು ಸಮರ್ಥಿಸಿಕೊಂಡರು. ಕಾದಂಬರಿ ಕ್ಷೇತ್ರ ರಚನೆಗಷ್ಟೆ ಸೀಮಿತವಾಗಿಸಿಕೊಂಡಿದ್ದ ಪ್ರಗತಿಶೀಲ ವಿಚಾರಗಳನ್ನು ಕುರಿತು ಕೆ.ಎಸ್.ನ. ರವರು ಪದ್ಯಗಳನ್ನು ಬರೆದು ಅಚ್ಚರಿಗೊಳಿಸಿದರು. ಆ ಮೂಲಕ ಸಣ್ಣ ಪ್ರಮಾಣದಲ್ಲಿ ಪ್ರತಿಭಟನೆಯನ್ನು ವ್ಯಕ್ತಪಡಿಸಿದರು. ಸಮಾಜದ ಅನೇಕ ಸಮಸ್ಯೆಗಳನ್ನು ಕುರಿತು ಮೇಲು ಕೀಳುಗಳನ್ನು ಕುರಿತು ಔದ್ಯೋಗಿಕ ಕ್ರಾಂತಿಯಿಂದುಂಟಾದ ಆಧುನಿಕತೆಯ ಪ್ರಭಾವನ್ನು ಕುರಿತು ಕಾವ್ಯ ಬರೆದರು. ಹಾಗೇಯೇ ನವ್ಯಕಾವ್ಯ ಪ್ರಬಲವಾಗಿದ್ದ ಕಾಲದಲ್ಲಿ ಕಾಲದೊತ್ತಡ ಮತ್ತು ಹೊಸದನ್ನೆಲ್ಲಾ ತನ್ನದಾಗಿಸಿಕೊಳ್ಳಬೇಕೆಂಬ ಉದ್ದೇಶದಿಂದ ಇವರು ನವ್ಯಕ್ಕೆ ಪ್ರತಿಕ್ರಿಯಿಸಿ ಕಾವ್ಯವನ್ನು ರಚಿಸಿರಬಹುದು.

ಕೆ.ಎಸ್.ನ. ರವರು ಕಾವ್ಯ ವಸ್ತುವಿಗಿಂತ ರೂಪದಲ್ಲಿ ಹೆಚ್ಚು ನವ್ಯವನ್ನು ಹೋಲುವಂತಿದ್ದರೂ ನವ್ಯದ ವಸ್ತು ಮತ್ತು ಅಭಿವ್ಯಕ್ತಿ ನಡುವಣ ಕೇಂದ್ರಿಕೃತ ಪ್ರಜ್ಞೆ ಇದ್ದಂತೆ ಕಾಣುವುದಿಲ್ಲ. ಅಭಿವ್ಯಕ್ತಿಯನ್ನು ರೂಪಿಸುವ ಉಪಮೆ, ರೂಪಕ, ಪ್ರತಿಮೆಗಳು, ಹೊಸ ರೀತಿಯವೆಂಬುದು ಕಂಡುಬಂದರು ಇವು ಮೊದಲಿನಿಂದಲೂ ಅಭಿವ್ಯಕ್ತಿ ಸಾಧನಗಳಾಗಿ ಕೆಲಸ ಮಾಡಿವೆ ಎಂಬುದು ಗಮನಾರ್ಹ. ನವ್ಯಕಾವ್ಯ ಆತ್ಮ ರತಿಯಮೇಲೆ ನಿಂತದ್ದು, ಅಂತರ್ಮುಖಿಯಾದದ್ದು ಆದರೆ ನರಸಿಂಹ ಸ್ವಾಮಿಯವರ ಕಾವ್ಯ ಸಾಂಪ್ರದಾಯಕವಾದದ್ದು.

ಕೆ.ಎಸ್.ನ. ರವರ ಕಾವ್ಯ ಒಮ್ಮೆಲೆ ಭಾವದೀಪ್ತತೆಯನ್ನು ವಿಚಾರ ಜಾಗೃತಿಯನ್ನುಂಟು ಮಾಡುವುದು ಬದಲಾದ ಜೀವನವನ್ನು ಪ್ರತ್ಯಕ್ಷಿಕರಿಸಿಕೊಳ್ಳುತ್ತಾ ಸಾಗುವುದು ಇವರ ಕಾವ್ಯದ ಜಾಯಮಾನ. ಆದರೆ ಯಾವುದೇ ತಾತ್ವಿಕತೆಯ ಸೋಂಕು ಅದಕ್ಕಿಲ್ಲ ಎನ್ನುವಂತಿಲ್ಲ ಇಂತಹ ಸಂದಿಗ್ಧತೆಯನ್ನು ಜೀರ್ಣಿಸಿಕೊಳ್ಳದಿರುವುದು ಆದ್ದರಿಂದ ಕಾವ್ಯಮಾರ್ಗಗಳ ತಾಕಲಾಟವಿಲ್ಲದೇ ಬರೆದ ಕವನಗಳೇ ಅವರ ಸಹಜ ಸೃಜನಶೀಲತೆಗೆ ನಿದರ್ಶನಗಳು. ಆದರೂ ಕವಿ ನರಸಿಂಹಸ್ವಾಮಿರವರು ಹುಡುಕಾಟದ ವಿವಿಧ ಮಜಲುಗಳಲ್ಲಿ ಹಾದುಬಂದಿದ್ದಾರೆ. ಕವಿಗೆ ಸಂಸವಹನ ಸಮಸ್ಯೆ ಕಾಡದಿದ್ದುದರಿಂದ ಕಾವ್ಯಮಾರ್ಗಗಳಿಗೆ ಅನ್ವಯಿಸಿಯೂ ಅವುಗಳನ್ನು ದಾಟುವ ಧೈರ್ಯವನ್ನು ಅವರ ಕಾವ್ಯ ತೋರಿರುವುದು ವಿಶೇಷ.

ಕೆ.ಎಸ್. ನರಸಿಂಹಸ್ವಾಮಿರವರು ಮೈಸೂರು ಮಲ್ಲಿಗೆಯ ಕವಿ, ಒಲವಿನ ಕವಿಯೆಂದೆ ಖ್ಯಾತಿ ಪಡೆದು ಕನ್ನಡಿಗರ ಪ್ರೀತಿಗೆ ಪಾತ್ರರಾಗಿದ್ದಾರೆ. ಇವರ ವೃತ್ತಿ ಜೀವನ ಮತ್ತು ಕಾವ್ಯಜೀವನಗಳೆರಡು ಒಂದರೊಡನೊಂದು ಸೇರಿಕೊಂಡು ಬೆಳೆದಿವೆ. ನಮ್ಮ ನವೋದಯದ ಎಲ್ಲಾ ಕವಿಗಳಿಗಿರುವ ಒಂದು ವ್ಯಕ್ತಿತ್ವ ಸಿದ್ಧಿ ಅವರಿಗೂ ಇದೆ, ಇವರ ಪರಿಣಿತ ಫಲವಾಗಿಯೇ ಅವರ ಕಾವ್ಯ ಒಡಮೂಡಿದೆ.

# ದಾಂಪತ್ಯ ಕಾವ್ಯದ ಸ್ವರೂಪ ಮತ್ತು ಲಕ್ಷಣಗಳು

ದಾಂಪತ್ಯ ಗಂಡು ಹೆಣ್ಣಿನ ವಿವಾಹ ನಂತರದ ದೇಹಕಾರ್ಷಣೆ ಮತ್ತು ಭಾವನಾತ್ಮಕ ಸಂಬಂಧ. ಗಂಡು ಹೆಣ್ಣಿನ ಮನಸ್ಸು ಮತ್ತು ಹೃದಯಗಳ ಸಮ್ಮಿಲನದ ಪ್ರತೀಕವಾದ ಘಟಕ. ಪ್ರತಿಯೊಬ್ಬ ಮನುಷ್ಯನ ಯೌವ್ವನದ ಒಂದು ಪ್ರಮುಖ ಘಟ್ಟ. ಇಂತಹ ದಾಂಪತ್ಯ ಸರಸ, ಸಂತೋಷಗಳಷ್ಟೇ ಅಲ್ಲದೆ ವಿರಸ, ನೋವು, ದುಃಖಗಳಂತಹ ಅನುಭವಗಳಿಂದ ಕೂಡಿರುತ್ತದೆ. ಹೀಗೆ ಗಂಡು ಹೆಣ್ಣಿನ ಸರಸ ವಿರಸ ಸನ್ನಿವೇಶಗಳನ್ನೊಳಗೊಂಡ ಕವಿಯ ಮನಸ್ಸಿನ ಭಾವನಾತ್ಮಕ ಅಭಿವ್ಯಕ್ತಿಯೇ ದಾಂಪತ್ಯ ಕಾವ್ಯ. ಇವು ನಮ್ಮ ಸಂಸ್ಕೃತಿಯ ಸೂಕ್ಷ್ಮಗಳನ್ನು ನಮ್ಮ ಸಂವೇದನೆಯ ವಿಶಿಷ್ಟತೆಗಳನ್ನು ಪ್ರತಿಬಿಂಬಿಸುತ್ತವೆ.

ಗಂಡು ಹೆಣ್ಣಿನ ನಡುವಿನ ದಾಂಪತ್ಯದ ನಡುವಿನ ಪೂರ್ವ ಚಿತ್ರಣವನ್ನೊಳಗೊಂಡ ಪ್ರೇಮಗೀತೆ ಎಂದೊಡನೆ ನಮಗೆ ಪಾಶ್ಚಾತ್ಯ ಮಾದರಿಯ ಕಲ್ಪನೆಗಳು ಮನಸ್ಸಿನಲ್ಲಿ ಮೂಡುತ್ತವೆ. ಇಂಗ್ಲೀಷ್ ಕಾವ್ಯಗಳಲ್ಲಿ ಹೇರಳವಾಗಿ ದೊರೆಯುವ ಪ್ರಣಯ ಗೀತೆಗಳೆಲ್ಲ ಸಾಮಾನ್ಯವಾಗಿ ವಿವಾಹ ಪೂರ್ವದ ಅನುರಾಗವನ್ನು ಕುರಿತ ರಚನೆಗಳಾಗಿವೆ. ವಿವಾಹ ಪೂರ್ವ ಪ್ರೇಮಕ್ಕೆ ಮನ್ನಣೆಯಿರುವ ಸಂಸ್ಕೃತಿಯಲ್ಲಿ ಇದು ಸಹಜವಾದುದ್ದೇ. ಆದರೆ ಮದುವೆಯಾದ ಮೇಲೆ ಇವರ ಪ್ರೇಮ ಯಾವ ರೀತಿ ತಿರುವನ್ನು ಪಡೆದು ಏನಾಗುತ್ತದೆ ಎಂಬುದು ಮಾತ್ರ ಅವರ ಕಾವ್ಯದಿಂದ ತಿಳಿಯುವುದಿಲ್ಲ. ಹೀಗೆ ವೈವಾಹಿಕ ಬದುಕಿನ ನಂತರದ ಸುಖಸಂತೋಷ ದುಃಖ ವಿರಸಗಳು ಇವರ ಕಾವ್ಯದ ವಸ್ತುವಾಗಲಿಲ್ಲ.

ಭಾರತೀಯ ಕಾವ್ಯ ಪರಂಪರೆಯಲ್ಲಿ ನವರಸಗಳಲ್ಲಿ ಶೃಂಗಾರ ರಸಕ್ಕೆ ಮೊದಲ ಸ್ಥಾನವನ್ನು ನೀಡಿದೆ. ಆದರೆ ದಾಂಪತ್ಯ ಪ್ರಣಯಕ್ಕೆ ಯಾವುದೇ ಸ್ಥಾನ ದೊರೆತಿಲ್ಲ ಎಂಬುದು ಕುತೂಹಲಕಾರಕ. ಬೇಂದ್ರೆಯವರು ಸಖೀಗೀತದ ಮುನ್ನುಡಿಯಲ್ಲಿ ಹೇಳಿರುವ ಹಾಗೆ ನಮ್ಮ ಕಾವ್ಯದಲ್ಲಾಗಲಿ ಜೀವನದಲ್ಲಾಗಲಿ ದಾಂಪತ್ಯ ಪ್ರಣಯಕ್ಕೆ ಸ್ಥಾನವಿಲ್ಲ. ವಿವಾಹ ಪೂರ್ವ ಪ್ರಣಯವಂತೂ ಸಾಂಸ್ಕೃತಿಕವಾಗಿ ನಿಷಿದ್ಧ. ಸಾಮಾಜಿಕವಾಗಿ ನೈತಿಕ ಮನ್ನಣೆಯಿಲ್ಲದ ವಿವಾಹ ಪೂರ್ವ ಪ್ರಣಯದ ಕಾವ್ಯ ನಮ್ಮಲ್ಲಿ ಇಲ್ಲದಿರುವುದು ಸಹಜವೇ. ಆದರೆ ದಾಂಪತ್ಯ ಪ್ರಣಯಕ್ಕೆ ಸ್ಥಾನ ದೊರೆಯದಿರುವುದು ಸ್ವಲ್ಪ ವಿಚಾರವಾಗಿ ಬಹುಶಃ ದಾಂಪತ್ಯದ ಸಂಬಂಧಗಳು ಶೃಂಗಾರದ ಮಟ್ಟಕ್ಕೆ ಇಳಿದು ತಮ್ಮ ಗೌರವವನ್ನು ಕಳೆದುಕೊಳ್ಳಬಹುದೆಂಬ ಉದ್ದೇಶವಿರಬಹುದೋ ಏನೋ? ಹೀಗಾಗಿ ನಮ್ಮ ಕಾವ್ಯಗಳ ಶೃಂಗಾರ ವೇಶ್ಯಾವಾಟಿಕೆಗಳನ್ನು ಹುಡುಕಿಕೊಂಡು ಹೋಗಿ ಉದಾತ್ತವೆನಿಸಲಿಲ್ಲ. ಇಲ್ಲವೇ ರಾಧಾಕೃಷ್ಣರ ಕಲ್ಪನೆಯಲ್ಲಿ ಅತೀ ಉದಾತ್ತವಾಯಿತು. ಭರತೇಶನ ಶೃಂಗಾರ ಚೇಷ್ಟೆಗಳನ್ನು ಅತ್ಯಂತ ರಸಿಕತೆಯಿಂದ ವರ್ಣಿಸಿರುವ ರತ್ನಾಕರವರ್ಣಿ ಕೂಡ ಭಾರತೀಯ ಕಾವ್ಯ ಪರಂಪರೆಯ ಮರ್ಯಾದೆಯನ್ನು ಮೀರಲಿಲ್ಲ. ಅವನ ಕಾವ್ಯದಲ್ಲಿಯ ದಾಂಪತ್ಯ ಪ್ರಣಯದ ಭೋಗ, ಯೋಗ, ಸ್ಪರ್ಶದಲ್ಲಿ ಮುಕ್ತಾಯಗೊಳ್ಳುವುದು ಅರ್ಥಪೂರ್ಣವಾಗಿದೆ. ಒಟ್ಟಿನಲ್ಲಿ ಪ್ರೇಮದ ಸಹಜ ಅಭಿವ್ಯಕ್ತಿ ನಮ್ಮ ಕಾವ್ಯದಲ್ಲಿ ಇರಲಿಲ್ಲ. ಆಧುನಿಕ ಮುದ್ದಣನೊಬ್ಬನೇ ಇದಕ್ಕೆ ಅಪವಾದ. ಇಂಥ ಪ್ರೇಮ ಕಾವ್ಯದ ಮಾದರಿ ನಮಗೆ ಬಂದದ್ದು ಇಂಗ್ಲೀಷ್‌ನಿಂದ. ಕನ್ನಡಕ್ಕೆ ಮೊದಲ ಭಾರಿ ಅತ್ಯಂತ ಪ್ರಭಾವ ಪೂರ್ಣವಾಗಿ ಪರಿಚಯಿಸಿದ ಇಂಗ್ಲೀಷ್ ಗೀತೆಗಳ ಸಂಕಲನದಲ್ಲಿ ಪ್ರೇಮಗೀತೆಗಳ ಸಂಖ್ಯೆ ಹೆಚ್ಚಾಗಿದೆ ಮತ್ತು ಅವೆಲ್ಲಾ ವಿವಾಹ ಪೂರ್ವ

ಪ್ರೇಮವನ್ನು ಕುರಿತ ಪದ್ಯಗಳೇ ಆಗಿವೆ. ಇವುಗಳಲ್ಲಿ ಕನ್ನಡ ಕಾವ್ಯಕ್ಕೆ ಪ್ರೇಮಗೀತೆಗಳ ಹೊಸ ಮಾದರಿಯನ್ನು ತೋರಿಸುತ್ತಿರುವ ಸೂಚನೆ ಸ್ಪಷ್ಟವಾಗಿದೆ.

ನವೋದಯ ಕಾವ್ಯದ ಮೇಲೆ ಶ್ರೀಯವರ ಅನುವಾದಗಳು ಗಾಢ ಪ್ರಭಾವವನ್ನುಂಟು ಮಾಡಿದ್ದರೂ ನವೋದಯ ಕವಿಗಳು ಯಾರೂ ತಮ್ಮ ಕಾವ್ಯದಲ್ಲಿ ವಿವಾಹ ಪೂರ್ವ ಪ್ರೇಮದ ಪಾಶ್ಚಾತ್ಯ ಮಾದರಿಯನ್ನು ಸ್ವೀಕರಿಸಲಿಲ್ಲವೆಂಬುದು ಸಾಂಸ್ಕೃತಿಕವಾಗಿ ಬಹಳ ಮುಖ್ಯವಾದ ಸಂಗತಿಯಾಗಿದೆ.. ಕನ್ನಡದ ಮೊದಲ ಪ್ರಣಯಗೀತೆಗಳ ಸಂಕಲನ ತೀ.ನಂ.ಶ್ರೀಯವರ 'ಒಲುಮೆ' ಉಲ್ಲೇಖಾರ್ಹ.

ಬೇಂದ್ರೆಯವರ 'ಸಖೀಗೀತ' 'ನೀ ಹಿಂಗ ನೋಡ ಬ್ಯಾಡ ನನ್ನ', 'ನನ್ನ ಕೈ ಹಿಡಿದಾಕೆ', 'ಬಿಸಿಲುಗುದುರೆ,' 'ಬರುವುದೇನೆ ನೆಪ್ಪಿಗೆ'.. ಮೊದಲಾದ ಪ್ರಸಿದ್ಧ ಕವಿತೆಗಳು ಬೇಂದ್ರೆಯವರೇ ಕರೆದುಕೊಂಡಿರುವ ಹಾಗೆ ಕೌಟುಂಬಿಕ ಭಾವಗೀತೆಗಳು. ಉಳಿದವು ಪ್ರೀತಿಯ ತತ್ವವನ್ನು ಕುರಿತವು. ಕುವೆಂಪುರವರ ಪ್ರೇಮಗೀತೆಗಳ ನಾಯಕಿ ಪತ್ನಿ, ರತ್ನನ ಪದಗಳ ಪುಟ್ನಂಜಿ ಅವರ ಪ್ರೀತಿಯ ಹೆಂಡತಿ. ನರಸಿಂಹಸ್ವಾಮಿಯವರ ಕವಿತೆಗಳಂತೂ ದಾಂಪತ್ಯ ಗೀತೆಗಳೆಂದು ಪ್ರಸಿದ್ಧಿಯನ್ನು ಪಡೆದಿವೆ. ಹೀಗೆ ಮುಂತಾದ ಕವಿಗಲೆಲ್ಲ ಪಾಶ್ಚಾತ್ಯ ಕಾವ್ಯದ ಮಾದರಿಯನ್ನು ನಮ್ಮ ಸಂಸ್ಕೃತಿಯ ಸಂದರ್ಭದಲ್ಲಿ ಸೂಕ್ಷ್ಮವಾಗಿ ಬದಲಿಸಿಕೊಂಡಿದ್ದಾರೆ.

ಈ ದಾಂಪತ್ಯ ವಸ್ತು ಕಾವ್ಯಕ್ಕಷ್ಟೇ ಸೀಮಿತವಾಗಿಲ್ಲ. ನವೋದಯದ ಅನೇಕ ಸಣ್ಣ ಕಥೆಗಳಲ್ಲಿಯೂ ಕಾಣಿಸಿಕೊಂಡಿದೆ. ಶ್ರೀನಿವಾಸರ 'ರಂಗಪ್ಪನ ಕಥೆ' ಗಳಲ್ಲಿ ಈ ಬಗೆಯ ಮೊದಲ ನಿದರ್ಶನಗಳು ದೊರೆಯುತ್ತವೆ. ಆನಂದರಂತೂ ದಂಪತಿಗಳ ಸರಸ ಸಲ್ಲಾಪಗಳನ್ನೆ ಮುಖ್ಯ ವಸ್ತುವಾಗುಳ್ಳ ಅನೇಕ ಸುಂದರ ಕತೆಗಳನ್ನು ಬರೆದಿದ್ದಾರೆ. ಎಳೆಯ ವಯಸ್ಸಿನ ಮದುವೆ, ವಧು ಪರೀಕ್ಷೆ, ಮೊದಲ ಭೇಟಿ, ಮೊದಲ ಸಲ ಹೆಂಡತಿಯನ್ನು ಮಾತನಾಡಿಸಲು ನಡೆಯುವ ಸಾಹಸಗಳು, ಪ್ರೇಮ ಪತ್ರಗಳು, ಎಳೆತನದ ಹುಡುಗಾಟ, ಹಿರಿಯರ ಕಣ್ಣು ತಪ್ಪಿಸಿ ನಡೆಸುವ ಮಾತುಕತೆಗಳು ಇವೆಲ್ಲಾ ಈ ಕಥೆಗಳಲ್ಲಿ ಸೊಗಸಾಗಿ ಮೂಡಿಬಂದಿವೆ.

ಆನಂತರದ ಪ್ರಗತಿಶೀಲರಂತೂ ಪ್ರೀತಿಯಂಥ ಉದಾತ್ತ ಭಾವನೆಗೆ ಅಡ್ಡಿಯಾಗುವ ವರ್ಗ, ಜಾತಿ, ವೈರತ್ವ ಮೊದಲಾದ ಸಾಮಾಜಿಕ ವೈಷಮ್ಯಗಳನ್ನು ಕುರಿತು ಬರೆದರು. ನವ್ಯರ ಕಾಲಕ್ಕೆ ಕಾವ್ಯದಲ್ಲೂ ಕಥೆಗಳಲ್ಲೂ ವಿವಾಹ ಪೂರ್ವ ಕಾಮ ವಿಪರೀತವಾಯಿತು. ಈಗ ಬಂಡಾಯದವರಿಗೆ ಶೋಷಣೆಯೊಂದೆ ಸಾಹಿತ್ಯದ ಪೂರ್ಣಾವಧಿಯ ವಸ್ತುವಾಗಿ ಪ್ರೇಮ, ದಾಂಪತ್ಯ, ಸಲ್ಲಾಪಗಳ ಅವಕಾಶವೇ ಇಲ್ಲದಂತಾಗಿದೆ.

ನವೋದಯ ಕಾವ್ಯದ ಸಂದರ್ಭದಲ್ಲಿ ಈ ಬಗೆಯ ದಾಂಪತ್ಯ ಪರಿಕಲ್ಪನೆಯ ಹಿನ್ನಲೆಯಲ್ಲಿ ಗಮನಿಸಬಹುದಾದ ಪ್ರಮುಖ ಕವಿಗಳೆಂದರೆ ದ.ರಾ. ಬೇಂದ್ರೆ ಮತ್ತು ಕೆ.ಎಸ್.ನರಸಿಂಹಸ್ವಾಮಿ ಇವರ ದಾಂಪತ್ಯ ಕಾವ್ಯವನ್ನು ತೌಲನಿಕವಾಗಿ ಅಧ್ಯಯನ ಮಾಡುವುದು ಅಗತ್ಯವೆನಿಸಿದೆ.

ದ. ರಾ. ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮ ಸ್ವರೂಪದ ಹಲವು ಬಗೆಗಳು ಅನೇಕ ಸಂಬಂಧಗಳಲ್ಲಿ ವ್ಯಕ್ತವಾಗುತ್ತವೆ. ದಾಂಪತ್ಯ ಪೂರ್ವದ ಹೆಣ್ಣು ಗಂಡು ದಾಂಪತ್ಯ ಚೌಕಟ್ಟಿನ ಗಂಡ ಹೆಂಡತಿ ಅನುಭಾವ ಲೋಕದೊಳಗಿನ ಪುರುಷ, ಸ್ತ್ರೀ, ಮಗು ಮತ್ತು ತಾಯಿಯ ನಡುವಿನ ಸಂಬಂಧವನ್ನು ಪರಿಭಾವಿಸುವ ನೆಲೆ

ಹೀಗೆ ಹಲವು ಮುಖಗಳಲ್ಲಿ ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮ ಅವಿಷ್ಕಾರವಾಗುತ್ತಾ ಹೋಗುತ್ತದೆ.

ಇವರ ದಾಂಪತ್ಯ ಪೂರ್ವ ಗಂಡು ಹೆಣ್ಣಿನ ಸಂಬಂಧವನ್ನು ವಿವರಿಸುವ ಕವನಗಳು ಇತರ ಕಾವ್ಯದಂತೆ ಸಹಜವಾದ ಅಭಿವ್ಯಕ್ತಿಯನ್ನು ಪಡೆದುಕೊಂಡಿದೆ. ಇಂತಹ ಕವನಗಳನ್ನು ದಾಂಪತ್ಯ ಕಾವ್ಯಗಳ ಕುರಿತು ವಿವೇಚಿಸುವುದಕ್ಕಿಂತ ಮುಂಚೆ ಪ್ರಸ್ತಾಪಿಸುವದು ಸೂಕ್ತ.

'ಬಡವರ ಮಗಳು', 'ಪೋರಿಪೋರ', 'ಕಾಮಕಸ್ತೂರಿ' ... ಮುಂತಾದವುಗಳು ಬೇಂದ್ರೆಯವರ ಪ್ರಣಯಗೀತೆಗಳಾಗಿವೆ. ಇಂತಹ ಪ್ರಣಯಗೀತೆಗಳಲ್ಲಿ ಕವನದ ನಾಯಕ ತನ್ನ ಒಲುಮೆಯ ಹೆಣ್ಣನ್ನು ಕುರಿತು ಹೇಳುವ ಕೆಲವು ಕವನಗಳಲ್ಲಿ ಒಂದು ರೀತಿಯ ಭರವಸೆ, ಉನ್ಮಾದ, ಪ್ರೀತಿಯ ಆವೇಶಗಳು ಕಂಡು ಬರುತ್ತವೆ. ಪ್ರೀತಿಗೆ ಪೂರಕವಾದ ಯೋಚನೆ ತೀವ್ರತೆಗಳೆಲ್ಲ ಇಲ್ಲಿ ಸಮೃದ್ಧವಾಗಿ ಮೂಡಿ ಬಂದಿದೆ.

ಮಾವು ಚಿಗಿತು ಮಲ್ಲಿಗೆ ಹೂತು
ಸುಗ್ಗಿ ಬಂದು ಮಗ್ಗಿಯೆ ಇರುವಿ
ಕಣ್ಣು ಮುಚ್ಚಿ ನಿನ್ನ ನೆನೆದೇ
ಎದೀ ಮುಗುಳು ತೆರೆಯಲೊಲ್ಲಿ
　　ಬಂಗಾರದ ಮಾಡದಿಂದ
　　ಸಿಂಗಾರದ ಮಳೆಗರಸೇನ
　　ಹ್ಯಾಂಗಾರ ಕಣ್ಮನಸೆತ್ತಿ
　　ಒಮ್ಮೆ ನೋಡ ಒಮ್ಮೆ ನೋಡ

(ಬಡವರ ಮಗಳು)

ಮುಗ್ಧ ನಾಯಕನ ತೀವ್ರ ಅಸಹಾಯಕತೆ, ಸಿಟ್ಟುಗಳು ಇಲ್ಲಿ ಅಷ್ಟೇ ಮುಗ್ದತನದ ವಿವರಗಳಲ್ಲೇ ರೂಪಿತಗೊಳ್ಳುತ್ತವೆ. ಕಾಮ ಕಸ್ತೂರಿ, ಪೋರಿ ಪೋರ ಕವನಗಳಲ್ಲಿ ಪ್ರಣಯದ ಧಾಟಿಯನ್ನು ಗಂಡೇ ತನ್ನ ಭಾವಗಳಲ್ಲಿ ಮುಂದಿಡುತ್ತದೆ. ಇಲ್ಲಿ ಅವನ ಭಾವನೆಗಳೇ ಪ್ರಧಾನವಾಗಿವೆ.

ಅನ್ನೋ ಜನರು ಏನು
ಅಂತ್ಯನ ಇರತಾರ
ಹೊರತಾದ ನೀ ಜನಕ

(ಕಾಮ ಕಸ್ತೂರಿ)

ಹೆಣ್ಣು ಮಣ್ಣು ಹ್ಯಾಳಂತ್ಸ
ಬಣ್ಣ ಕಡೆ ಬಾಳದಂತ್ಸ
ಬಾಳುವೀ ಸುಳ್ಳಾಟಂತ್ಸ
ಹೆದರಲಿಲ್ಲಾ ! ಯಾರೂ ಹೆದರಿಸಲಿಲ್ಲಾ

(ಪೋರಿ ಪೋರ)

ಗಂಡು ಹೆಣ್ಣಿಗೆ ಕೊಡುವ ಭರವಸೆಯ ಭಾವಗಳು ಇಲ್ಲಿ ಕವಿಯೇ ಅಭಿವ್ಯಕ್ತಿಸುವಂತೆ ಪರಂಪರೆಯ ಸಾಂಪ್ರಾದಾಯಿಕ ನಿಲುವುಗಳನ್ನು ಮೀರುವುದಾಗಿದೆ. ಈ ಅರ್ಥದಲ್ಲೇ ಕವನದಲ್ಲಿನ ಒಂದು ನಿರ್ಧಿಷ್ಟ ಧೋರಣೆ ಹಾಗೂ ಬಂಧವನ್ನು ಗುರುತಿಸಬಹುದು. ಒಂದು ರೀತಿಯ ಆವೇಶ ಮತ್ತು ಅದರ ಹಿಂದಿನ ಘಟನೆಗಳ ನಿರ್ಧಾರಗಳೇ ಕವನಗಳ ಆಶಯವನ್ನು ರೂಪಿಸಿವೆ. ಈ ಮೇಲಿನ ಕವನಗಳಲ್ಲಿ ಪ್ರಣಯದ ಮುಖ್ಯ ಕೇಂದ್ರ ನಾಯಕನಾಗಿರುವಂತೆ ನಾಯಕಿ ಕೇಂದ್ರಿತ ಪ್ರಣಯಗೀತೆಗಳು ಪ್ರಧಾನವಾಗಿ ಬೇಂದ್ರೆಯವರ ಕಾವ್ಯದಲ್ಲಿ ಕಾಣಸಿಗುತ್ತವೆ.

'ಹರಕೆ' ಕವನದಲ್ಲಿ ಹರೆಯದ ಹುಡುಗಿಯ ಪ್ರೇಮದ ಪ್ರತೀಕ್ಷೆಗಳು ಯಾವ ಬಗೆಯಲ್ಲಿ ಕೈಗೂಡುವವೋ ಎನ್ನುವ ಸಂದೇಹದ ಛಾಯೆಯಲ್ಲಿ ಕವನದ ವಿವರಗಳು ಬೆಳೆಯುತ್ತಾ ಹೋಗುತ್ತವೆ. 'ಹರೆಯ ಚಿಗುರಡಗಿ ನೆತ್ತರ ನೆರಗಂಪು ಹಳಸುತಿದೆ ಭರದಲ್ಲೆ' ಹೀಗೆ ಕಾಲಕಳೆಯುತ್ತಲೇ ಬರಲಿರುವ ಪ್ರತೀಕ್ಷೆಯ ಪರಿಣಾಮವೆಂಥದೋ ಎನ್ನುವ ಆತಂಕದ ಧ್ವನಿ ಕವನದ ಒಡಲಲ್ಲಿ ಇದೆ.

ದಿನದ ದಣಿಯನು ಕಳೆಯೆ ತಂಗಿ ಹಾರುವ ಹಕ್ಕಿ
ಎರಗದಿರಲಿಲ್ಲಿ ಕಟ್ಟಾಡಿಸಲು ಬರದಿರಲಿ
ಹುಡುಗಗಾಳಿ ಅನಾದಿ ವಂಶದಾ ವೈಭವವೊ
ದಯವ ಮ್ಯೂಸಿಸಿ ಬಿಡುವ ತುಂಬಿ ಬರದಿರು ನವನವೋ
ನವ ಮನೋರಥ ಸಫಲ ಪೊಸ ಬಸಂತನೆ ಬರಲಿ
ನಿನಗೆ ಕಾವಲವಿರಲಿ ನಿನ್ನ ಚಂದ್ರಮ ಚಿಕ್ಕಿ

(ಹರಕೆ)

ಸಫಲ ಫಲಗಳ ನೆಲೆಗಳ ಹಾರೈಕೆ ಇಲ್ಲಿ ಧ್ವನಿತವಾಗುತ್ತಿದ್ದಾಗ್ಯೂ ಆತಂಕಗಳ ಭಾವ ಪ್ರಧಾನವಾಗಿದೆ. ಗಂಡು ತಾನೇ ತನ್ನನ್ನು ಕೊಡಾಗಿನ ತೊಡಗಿಸಿ ಪ್ರಣಯ ವಿವರಗಳಿಗಿಂತ ಭಿನ್ನ ಸ್ವರೂಪವಿದ್ದು, ಇಲ್ಲಿ ಕಂಡು ಬರುವ ದೃಢವಿಶ್ವಾಸ ಅವನದೇ, ವ್ಯಕ್ತಿತ್ವ ರೂಪಿಸಿದ ಧೋರಣೆಯ 'ಹರಕೆ' ಕವನದಲ್ಲಿ ಅಂತಹ ವಾತಾವರಣ ಇಲ್ಲದ ಸಂದರ್ಭವೊಂದರ ವ್ಯಕ್ತಸ್ಥಿತಿಯ ಹೀಗೆ ವಿವರಿಸಲ್ಪಟ್ಟಿದೆ.

ಬೇಂದ್ರೆಯವರ ಮೇಲಿನ ಪ್ರಣಯಗೀತೆಗಳಷ್ಟೆ ಅಲ್ಲದೆ ಅನಂತ ಪ್ರಣಯ, ವಾರಿನೋಟ, ಚಿರಂತನ, ನಲ್ಲ ನಲ್ಲೆಯರ ಲಲ್ಲೆ ಮುಂತಾದ ಕವನಗಳಲ್ಲಿ ಪ್ರಣಯದ ನಿಸರ್ಗ ಸಹಜವಾದ ಆಕರ್ಷಣೆ ಸೆಳೆತಗಳ ಆರಂಭದ ಬೆಳವಣಿಗೆಗಳ ತಲ್ಲಣವಿರುವುದನ್ನು ಕಾಣಬಹುದು.

ಒಲುಮೆ ಕವಿಯೆಂದೇ ಪ್ರಸಿದ್ಧರಾದ ಕೆ.ಎಸ್. ನರಸಿಂಹಸ್ವಾಮಿಯವರ ಎಲ್ಲಾ ಕಾವ್ಯವಸ್ತು ದಾಂಪತ್ಯ ಪ್ರೇಮ. ಮದುವೆಯಾದ ಹೊಸದರಲ್ಲಿನ ರಮ್ಯ ಪ್ರಪಂಚವೊಂದು ಇವುಗಳಲ್ಲಿ ತೆರೆದುಕೊಳ್ಳುತ್ತದೆ. ಅಂದ ಮಾತ್ರಕ್ಕೆ ಇವರಲ್ಲಿ ವಿವಾಹ ಪೂರ್ವ ಪ್ರಣಯ ಚಿತ್ರಣವಿಲ್ಲ ಎಂಬರ್ಥವಲ್ಲ. ವಿವಾಹ ಪೂರ್ವ ವಿಷಯ ಬಂದರೂ ಅದು ವಿವಾಹದ ಸಿದ್ಧತೆಯ ಹಿನ್ನಲೆಯಲ್ಲಿ ಬಂದುದಾಗಿರುತ್ತದೆ. ಇಂಥದೊಂದು ಕವನ 'ಹಳ್ಳಿಯ ಚೆಲುವೆಗೆ' ವಿವಾಹವಾಗಲಿರುವವಳ ವರ್ಣನೆ ಇದರ ವಸ್ತು. ಗಂಡಿನ ಸಂಭೋದನೆಯಲ್ಲಿ ಕವನ ಪೂರ್ಣ

ಅಭಿವ್ಯಕ್ತಿಯಿದೆ. ಗಂಡು ತನ್ನ ಹೆಣ್ಣಿನ ಆಯ್ಕೆಯಲ್ಲಿ ಹೇಳುವ ಪರಿಯಿದು..

ನವಿಲೂರಿನೊಳಗೆಲ್ಲ ನೀನೆ ಬಲು ಚೆಲುವೆ
ಅದಕೆ ನಮ್ಮಿಬ್ಬರಿಗೆ ನಾಳೆಯೇ ಮದುವೆ
ಬೆಳ್ಳ ಬೆಳ್ಳಗೆ ತೆಳ್ಳತೆಳ್ಳಗಿಹೆ ನೀನು
ಬೇಟೆಗಾರನ ಬಿಲ್ಲಿನಂತಿರುವೆ ನೀನು
ಒತ್ತಾಗಿ ಕಪ್ಪಾಗಿ ಬೆಳೆದಿರುವ ಹುಬ್ಬು
ಪಾರಿವಾಳದ ಕಣ್ಗೆ ನೆರಳನಿತ್ತಿಹುದು

(ಹಳ್ಳಿಯ ಚೆಲುವೆಗೆ)

ತನ್ನನ್ನು ಮದುವೆಯಾಗಲಿರುವವಳ ವರ್ಣನೆಯನ್ನು ಮುಂದೆ ಅವಳನ್ನು ನೋಡಿಕೊಳ್ಳಲಿರುವರ ತನ್ನ ಆಶ್ವಾಸನೆಯನ್ನು ಇಲ್ಲಿ ಕಂಡುಕೊಳ್ಳುತ್ತಾರೆ. ಅವಳ ಸೌಂದರ್ಯಕ್ಕೆ ಇಂಪಾದ ನುಡಿಗೆ ಸೋತಿರುವ ಆತ ತನ್ನನ್ನು ನಂಬಿ ವರಿಸಿ ಸಂತಸದಿಂದ ಬಾಳುವಂತೆ ಆಹ್ವಾನಿಸುತ್ತಾನೆ. ಅವಳನ್ನು ನೋಡಿಕೊಳ್ಳಲು ತನ್ನ ಶ್ರಮವನ್ನು ಮುಂದಿಡುತ್ತಾನೆ.

ಹಗಲೆಲ್ಲ ದುಡಿಯುವೆನು ಕೆಸರ ಗದ್ದೆಯಲಿ
ಶ್ರಮವೆಲ್ಲ ಹೊನ್ನಹುದು ವರ್ಷದಂತ್ಯದಲಿ
ನಿನ್ನ ತಟ್ಟೆಯ ತುಂಬ ಅನ್ನ ನೊರೆಹಾಲು
ನನ್ನ ನುಡಿಯನು ಕೇಳು ನನ್ನೊಡನೆ ಬಾಳು

(ಹಳ್ಳಿಯ ಚೆಲುವೆಗೆ)

ಹೆಂಡತಿಯನ್ನು ಸಾಕಲು ದುಡಿಮೆಯನ್ನು ಮುಂದಿಡುವುದು ಈ ಹಳ್ಳಿಯ ಹಿನ್ನಲೆಯಲ್ಲಿ ಸಹಜವಾಗಿದೆ. ಅವಳಿಗೆ ಅನ್ನ ನೊರೆ ಹಾಲು ಕೊಟ್ಟು ಸಲಹಲು ಅವನು ಸಿದ್ಧ ಇದಕ್ಕೆ ಪ್ರತಿಫಲವಾಗಿ ಅವಳಿಂದ ಕೇಳುವುದು ಕೇವಲ ಪ್ರೀತಿ.ಒಂದನ್ನು ಮಾತ್ರ. ಹೀಗೆ ದುಡಿಮೆ 'ಪ್ರೀತಿ'ಗಳ ಸಮ್ಮಿಲನದ ಸಾಕ್ಷಿಯಾಗಿ ಕವನ ರೂಪು ಪಡೆಯುತ್ತದೆ. ಅದು ಗಂಡು ಹೆಣ್ಣಿನ ದಾಂಪತ್ಯದಲ್ಲಿ ಅಸ್ತಿತ್ವ ಪಡೆಯಬೇಕೆನ್ನುವುದು ಕವನದ ಉದ್ದೇಶವಾಗಿರುವಂತಿದೆ.

ಬೇಂದ್ರೆಯವರ ದಾಂಪತ್ಯದ ಚೌಕಟ್ಟಿನೊಳಗೆ ಬರುವ ಕವನಗಳಲ್ಲಿ ಪ್ರಣಯ, ಒಲವಿನ ಸಾಮರಸ್ಯದ ಸ್ವರೂಪ ಬೇರೆಯ ಅರ್ಥವನ್ನು ಗಳಿಸುವ ಹಾದಿಯಲ್ಲಿ ಮುನ್ನಡೆಯುತ್ತದೆ. ಪ್ರಣಯದ ಲೀಲಾವಿಲಾಸಗಳಾಗಲಿ ಆವೇಶ ಉನ್ಮಾದಗಳಿಗಾಗಲಿ ಇಲ್ಲಿ ಅವಕಾಶವಿಲ್ಲ. ಇಲ್ಲಿಯ ಕವನಗಳೆಲ್ಲೆಲ್ಲಾ ಕವನ ನಾಯಕ ತನ್ನ ಜೀವನಾನುಭವಗಳಿಗೆ ತನ್ನನ್ನು ಒಳಗು ಮಾಡಿಕೊಳ್ಳುವ ಪ್ರಯತ್ನ ಮಾಡುತ್ತಿರುವಂತೆ ತೋರುತ್ತದೆ. ಸಹಜವಾಗಿಯೇ ಇಲ್ಲಿಯ ಜೀವನಾನುಭವದ ಕೇಂದ್ರ ತನ್ನ ಕೈ ಹಿಡಿದಾಕೆಯ ಜೊತೆಗಿನ ಕೌಟಂಬಿಕ ಚೌಕಟ್ಟಿನದ್ದೇ ಆಗಿರುತ್ತದೆ. ಒಂದು ಬಗೆಯ ಸುಖ ದುಃಖ ಮಿಶ್ರಿತ ಅನುಭವದ ಮಿಳಿತವನ್ನು ಅಂದರೆ ವಿರಸ ಮತ್ತು ಸರಸ ಪ್ರಧಾನವಾದ ದಾಂಪತ್ಯಚಿತ್ರಣವನ್ನು ಇವರ ಕಾವ್ಯದಲ್ಲಿ ಕಾಣಬಹುದು. ಈ

ಎಲ್ಲಾ ಕವನಗಳ ಹಿನ್ನಲೆಯಲ್ಲಿ ಜೀವನದ ಸಾಮರಸ್ಯ ಹಾಳಗಿ ಹೋಗಬಾರದೆಂಬ ಒಂದು ಮಿಡಿತವೂ ಸದಾ ಇರುತ್ತದೆ. ಆದ್ದರಿಂದಲೇ ಇಲ್ಲಿಯ ಬಹುಪಾಲು ಕವನಗಳ ನಾಯಕ ತನ್ನ ಕೈ ಹಿಡಿದಾಕೆಯನ್ನು 'ಸಖಿ' ಎಂದು ಭಾವಿಸುವ ಪ್ರಯತ್ನ ಮಾಡುತ್ತಾನೆ. ಇಲ್ಲೆಲ್ಲಾ 'ಹೆಣ್ಣು' ಈ ಜೀವನ ಸಮಸ್ಯೆಗಳಲ್ಲಿ ಗಾಢವಾಗಿ ತನ್ನನ್ನು ತೊಡಗಿಸಿಕೊಂಡವಳಾಗಿರುತ್ತಾಳೆ.

ಇಂತಹ ಕೌಟಂಬಿಕ ಚಿತ್ರಣವನ್ನು ಒಳಗೊಂಡ ಬೇಂದ್ರೆಯವರ ಕವನಗಳಲ್ಲಿ 'ಬಿಸಿಲುಗುದುರೆ' ಕವನವೂ ಒಂದು. ದುಃಖ ಮೌನ ಇಲ್ಲಿಯ ಅನುಭವಗಳಿಗೆ ಹಿಡಿದ ಪ್ರಧಾನ ಪ್ರತಿಮೆಗಳಾಗಿವೆ ಎನ್ನುವುದು ಪ್ರಮುಖ ಅಂಶವಾಗಿದೆ. ಬಹುಪಾಲು ಕವನಗಳು ನೋವನ್ನು ಬಿತ್ತರಿಸುವ ವಾತಾವರಣವನ್ನು ಸೃಷ್ಟಿಸುತ್ತವೆ. ಆದರೆ ಇಲ್ಲಿ ಬದಲಾವಣೆಯ ಸ್ವರೂಪವನ್ನು ಚಿತ್ರಿಸಲಾಗಿದೆ.

ಹಳ್ಳಾದ ದುಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತs
ಏನೊಂದು ನಗಿ ಇತ್ತಾ ಏನೊಂದು ನಗಿ ಇತ್ತಾs
ಏರಕಿ ನಗಿ ಇತ್ತs
ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತs
ಹೋಗೇತಿ ಎತ್ತೆತ್ತs

(ಬಿಸಿಲುಗುದುರೆ)

ಅವಳ ಮೊದಲ ನಗೆಯ ಉತ್ಸಾಹಕ್ಕೂ ಈಗಿನ ಮೌನಕ್ಕೂ ಇರುವ ಅಂತರವನ್ನು ನಾಯಕ ಗುರುತಿಸುತ್ತಾನೆ. ಇಡೀ ಕವನದಲ್ಲಿ ನಗೆ ಮತ್ತು ಉತ್ಸಾಹಗಳು ಭೂತದ ಕ್ರಿಯೆಯಾಗಿದ್ದು, ಈಗಿನ ದಾರುಣ ಜೀವನದ ಹೊಡೆತಗಳಿಗೆ ಧ್ವನಿ ರೂಪಕಗಳಾಗಿವೆ. ಇಲ್ಲಿನ ಬದಲಾವಣೆಗೆ ಕಾರಣವನ್ನು ಕವನ ವಾಚ್ಯ ನೆಲೆಯಲ್ಲಿ ನಿರೂಪಿಸಲಾಗುತ್ತದೆ.

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವೆಯ ಒಲಿಮ್ಯಾಗ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಪಾಂಗ
ಬಂತಂತ ಮುಪ್ಪು ಬ್ಯಾಗ

(ಬಿಸಿಲುಗುದುರೆ)

ನಗೆಯು ಮಾಯವಾದುದಕ್ಕೆ ಬಾಳ್ವೆಯ ಹಲವು ನೋವುಗಳನ್ನು ಕಾರಣವಾಗಿ ಕೊಡುವ ಈ ಕವನದಲ್ಲಿ ಗಂಡು ಮಾತ್ರಅದೆಲ್ಲವನ್ನೂ ಅವಳ ಅನುಭವವೆಂಬಂತೆ ನೋಡುತ್ತಿದ್ದಾನೆ. 'ಸುಟ್ಟು ಹಪ್ಪಳದ್ಹಾಂಗ', 'ಸೊರಗಿದಿ ಸೊಪ್ಪಾಂಗ'..ಮೊದಲಾದ ಪ್ರತಿಮೆಗಳು ಆಕೆಯ ಸ್ಥಿತಿಯನ್ನು ತಿಳಿಸುತ್ತವೆ. ಬಾಳ್ವೆಯ ಈ ನೋವುಗಳ ಅರಿವಿದ್ದರೂ ಅಂತ್ಯದಲ್ಲಿ ಹೇಳುವ ಪ್ರಕೃತಿದತ್ತ ವಯೋಮಾನದ ಪರಿಣಾಮದ ಬಗ್ಗೆಅವನಿಗೆ ನಿರಾಶೆಯಿದೆ. ಪಡೆದ ಅನುಭವಗಳ ನಡುವೆಯೇ ನಗೆಯನ್ನು ಆಶಿಸುವ ಗಂಡಿನ ಆಕಾಂಕ್ಷೆಗಳು ಅಂಥ ಅನುಭವದ

ಹೊಡೆತದಿಂದ ವ್ಯಕ್ತಿತ್ವವನ್ನು ಘಾಸಿಗೊಳಿಸಿಕೊಳ್ಳುತ್ತಿರುವ ಹೆಣ್ಣಿಗಿಂತ ಭಿನ್ನವಾಗಿದೆ. 'ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ ಹೋಗೇತಿ ಎತ್ತೆತ್ತ' ಎನ್ನುವ ಬದುಕನ್ನು ಪುನರಾವಲೋಕನ ಮಾಡಿದಂತೆ ಮಾತುಗಳಲ್ಲಿ ತೋರಿದರೂ ಅನುಭವದ ಅಘಾತದಿಂದ ಎಚ್ಚರಿಸುವ ಧ್ವನಿಯೂ ತುಂಬಿರುವಷ್ಟು ಅದು ಒಳಸತ್ವವನ್ನು ಹೊಂದಿದೆಯೆನಿಸುತ್ತದೆ.

'ನೀ ಹಿಂಗ ನೋಡಬ್ಯಾಡ' ಕವನವು 'ಬಿಸಿಲುಗುದುರೆ' ಕವನದ ಅನುಭವದ ಜಗತ್ತನ್ನೇ ಇನ್ನೂ ತೀವ್ರವಾಗಿ ಹೇಳುತ್ತದೆ.

ನೀ ಹಿಂಗ ನೋಡಬ್ಯಾಡ ನನ್ನ
ನೀ ಹಿಂಗ ನೋಡಿದರೆ ನನ್ನ
ತಿರುಗಿ ನಾ ಹ್ಯಾಂಗ ನೋಡಲೇ ನಿನ್ನ

ಎಂಬ ಆರಂಭದ ಸಾಲುಗಳಲ್ಲೇ ಸಂದರ್ಭದ ಗಂಭೀರತೆಯು ಕಣ್ಣಿಗೆ ಕಟ್ಟುವಂತಿದೆ. ಈ ಕವನವು ಭಯ ಮತ್ತು ಆತಂಕವನ್ನು ಸೃಷ್ಟಿಸುತ್ತದೆ. ಕವನದ ತುಂಬಾ ಹೆಣದ ಪ್ರತಿಮೆಗಳು, ಹೆಣ್ಣಿನ ಅಂತಃಕರಣ ಮೇಳೈಸಿದ ವ್ಯಕ್ತಿತ್ವಕ್ಕೆ ಸಂಕೇತವಾಗಿ ಬರುತ್ತವೆ. ಕವಿಯು ಸಂದರ್ಭದ ಗಾಂಭೀರ್ಯತೆಯನ್ನು ಪ್ರತಿಮೆಗಳ ಮೂಲಕವೇ ಪರಿಭಾವಿಸುತ್ತಾನೆ.

ಇಬ್ಬನಿ ತೊಳೆದರೂ ಹಾಲು ಮೆತ್ತಿದಾ ಕವಳಿ ಕಂಟಿಯಾ ಹಣ್ಣು
ಹೊಳೆ ಹೊಳೆವ ಹಾಂಗ ಕಣ್ಣಿರುವ ಹೆಣ್ಣ, ಹೇಳು ನಿನ್ನವೇನ ಈ ಕಣ್ಣು ?
ದಿಗಿಲಾಗಿ ಅನ್ನತದ ಜೀವ ನಿನ್ನ ಕಣ್ಣಾರೆ ಕಂಡು ಒಮ್ಮಗಿಲ್ಲ
ಹುಣ್ಣಿವೀ ಚಂದಿರನ ಹೆಣಾ ಬಂತೂ ಮುಗಿಲಾಗಿ ತೇಲುತ ಹಗಲ್ಲ!

(ನೀ ಹಿಂಗ ನೋಡಬ್ಯಾಡ ನನ್ನ)

ಕವಿಗೆ ಸಂಸಾರದಲ್ಲಿನ ಆಗು ಹೋಗುಗಳ ವಾಸ್ತವತೆಯ ಅರಿವಿದೆ. ಸುಖದುಃಖಗಳ ಜೊತೆ ಭಾವನಾತ್ಮಕ ಸಂಘರ್ಷವಿದೆ. ಇವು ಒಂದು ನೆಲೆಯಲ್ಲಿ ತಾತ್ವಿಕ ಮಾತುಗಳಂತೆ ಕಾಣುತ್ತವೆ.

ಸಂಸಾರ ಸಾಗರದಾಗ ಲೆಕ್ಕವಿರದಷ್ಟು ದುಃಖದ ಬಂಡಿ
ನಾ ಬಲ್ಲೆ ನನಗೆ ಗೊತ್ತಿಲ್ಲದಿದ್ದರೂ ಎಲ್ಲಿ ಆಚೆಯೂ ದಂಡಿ
ಮಲಗಿರುವ ಕೂಸು ಮಲಗಿರಲಿ ಅಲ್ಲಿ ಮುಂದಿನದು ದೇವರಚಿತ್ತ
ನಾ ತಡೀಲಾರೆ ಅದು ಯಾಕ ನೋಡತೀ ಮತ್ತ ಮತ್ತ ನೀ ಇತ್ತ?

(ನೀ ಹಿಂಗ ನೋಡಬ್ಯಾಡ ನನ್ನ)

ಕವನಗಳಲ್ಲೆಲ್ಲಾ ನಿರೂಪಕ ಸಂಸಾರದ ಬಗ್ಗೆ ಹೇಳುವ ತಾತ್ವಿಕ ಚಿಂತನೆಗಳು ಮತ್ತೆ ಮತ್ತೆ ಮರುಕಳಿಸುತ್ತವೆ. 'ನನ್ನ ಕೈ ಹಿಡಿದಾಕೆ' ಕವನವೂ ಇದೇ ರೀತಿಯ ಭಾವದ ನೆಲೆಯುಳ್ಳದ್ದು. ಹೆಣ್ಣಿಗೆ ಸಂದರ್ಭದ ತೀವ್ರತೆ ಮತ್ತು ಅನಾಹುತದ ಅರಿವನ್ನು ವಿವರಿಸುವ ದಾಟಿ ಮನೋಜ್ಞವಾಗಿದೆ.

ಸಂಸಾರದ ದುಃಖ ನೋವುಗಳನ್ನೊಳಗೊಂಡ ಮತ್ತೊಂದು ಕವನ 'ಹುದುಗಲಾರದ ದುಃಖ'. ಹೆಣ್ಣು ತನ್ನ ನೋವನ್ನು ಮುಚ್ಚಿಡುವ ಪ್ರಯತ್ನದಲ್ಲಿ ನಸುನಗುತ್ತಾ ಗಂಡನಿಗೋ ಮುಖಾಮುಖಿಯಾಗುತ್ತಾಳೆ. ಆದರೆ ನಿರೂಪಕ ಅವಳ ಮನಸ್ಸಿನ ನೋವನ್ನು ಅರಿಯಬಲ್ಲವ. ಅವಳ ಪ್ರೀತಿ ವಾತ್ಸಲ್ಯಗಳ ಅರಗಿಸಿಕೊಂಡ ಅಭಿವ್ಯಕ್ತಿ ಹಾಗೂ ಮನಸ್ಸಿನ ನೆಲೆಗಳನ್ನು ಅರಿತ ಅವನ ಪ್ರತಿಕ್ರಿಯೆಗಳು ಸಖ್ಯದ ಒಂದು ಎಳೆಯನ್ನು ಸಿಂಧುತ್ವಗೊಳಿಸಿವೆ.

ಎಲೆಲೆ ಜೀವದ ಗೆಳತಿ! ನನ್ನೆದೆಯ ಗುಡಿಯಲ್ಲಿ
ನೀನು ಆಟ ಮಟಿಸುತಿರಲು
ನಿನ್ನ ನಗೆ ಸುಖದ ಹೂವೆಂದು ತಿಳಿಯಲಿ ಹೇಗೆ
ಅಂತಿಂತು ನಟಿಸುತಿರಲು

(ಹುದುಗಲಾರದ ದುಃಖ)

ದುಃಖದ ನೆಲೆಗಳನ್ನು ಹಂಚಿಕೊಳ್ಳುವ ಮತ್ತು ಅವುಗಳನ್ನು ಮೀರುವ ಪ್ರಯತ್ನಬೇಕೆನ್ನುವ ಆಶಯವು ಗಂಡಿನ ವ್ಯಕ್ತಿತ್ವದಲ್ಲಿ ಆಳವಾಗಿ ಬೇರೂರಿರುವುದು 'ದಾಂಪತ್ಯದಲ್ಲಿ ಬೆಸೆಯಬೇಕಾದ ಸಖ್ಯತನ ಮತ್ತು ಜೀವೋನ್ಮುಖ ನೆಲೆಗಳ ಹುಡುಕಾಟಗಳು'. ಅವನ ಅನುಭವದ ಭಾಗವಾಗಿಯೇ ಮಾಡಿಬರುವಂಥವುಗಳಾಗಿರುವುದು. ಈ ಎರಡು ಅಂಶಗಳು ಈ ಕವನದಲ್ಲಿ ಗಮನಾರ್ಹ.

'ಮನದನ್ನೆ' ಕವನ ವಿಷಾದ ಹಾಗೂ ಪ್ರತಿಕ್ರಿಯೆ ಭಾವಗಳಿಗಷ್ಟೇ ಸೀಮಿತವಾಗಿಲ್ಲ. ದಾಂಪತ್ಯದ ವಿಷಯ ಭಾವವನ್ನು ತೊಡೆಯಬೇಕೆನ್ನುವ ಹಾರೈಕೆಯು ಇಲ್ಲಿ ಮುಖ್ಯವಾದ ಆಶಯವಾಗಿದೆ. ವಾದ ವಿವಾದ ಪ್ರತಿವಾದ ಹೋಗಿ ಅರ್ಥಪೂರ್ಣ ಸಂವಾದಕ್ಕೆ ಇಲ್ಲಿ ಹಾತೊರೆಯಲಾಗಿದೆ. ಹಾಗಾಗಿ ಅನುಭವದ ಭಾವನೆಗಳಿಂದಲೇ ಪೂರ್ಣ ಕವನವು ರೂಪುಗೊಳ್ಳುತ್ತದೆ.

ಆಡದಿರು ಮನದನ್ನೆ
ಎನಗೆ ಇದಿರಾಡದಿರು
ವಾದಕ್ಕೆ ಬೇಸತ್ತು
ಮರ್ಮಘಾತಕ್ಕೆ ಸತ್ತು
ಉಳಿದು ಬಂದೆ
ಎಲಿಹುದು ತಿಳಿವಳಿಕೆ
ಜೀವನದಿ ಸಲವಳಿಕೆ
ಎಂದು ತಳಮಳಿಸಿ ನೀರಡಿಸಿ ಬಂದೆ

ಹೇಳುತಿರೆ ಹೂಂ ಅನ್ನು
ಒರೆದು ನೋಡೀ ಹೊನ್ನು
ಹೊಳೆದ ಗೆರೆ ಬಣ್ಣಗಳ ತಿಳಿದು ನೋಡು
ಎದೆಯ ಆಳದ ಮಾತನಳೆದು ನೋಡು

(ಮನದನ್ನೆ)

'ಎದೆಯಾಳದ ಮಾತು' ಜೀವನದ ಸಲವಳಿಕೆಗಾಗಿ ಇರಬೇಕಾದ ಅರಿವು ಇವುಗಳನ್ನು ಬಯಸುವ ಆಕಾಂಕ್ಷೆ ಕವನದ ಮೇಲೆ ಉದಾಹರಿಸಿದ ಮೊದಲ ಭಾಗದಿಂದ ಕೊನೆಯ ಭಾಗದವರೆಗೂ ಪುನರಾವರ್ತನೆಗೊಳ್ಳುವ ಆಶಯವಾಗಿ ಸಾಕು ಮಾಡು ಜೀವ ಸಂವಾದಕ್ಕೆ ಹಸಿದು ಬಂದೆ ಜೀವ ಜೀವಾಳದಲ್ಲಿ ಹೃದಯಾಂತರಾಳದಲಿದಿಳಿದು ನೋಡು ಎಂಬ ಮಾತಗಳು ಕವನದ ಮುಖ್ಯ ಹಾದಿಯಾಗಿರುವಂತೆ ಜೀವನ ದೃಷ್ಟಿಯ ಎರಡು ಸ್ವರೂಪವನ್ನು ಎತ್ತಿ ಹೇಳಲು ಪ್ರಯತ್ನಿಸುತ್ತಿವೆ. ಒಂದು ಹೃದಯದ ಮೂಲಕ ಎತ್ತಿ ತೋರುವ ಬಗೆಯ ಬಾನ್ ಬಯಲಲ್ಲಿ ರೆಕ್ಕೆ ಬಿಚ್ಚಿ ಹಾರುವ ಚಿತ್ರ, ಮತ್ತೊಂದು ನಾಗಲೋಕದಿಂದ ರತ್ನರಾಶಿಗಾಗಿ ಹಾತೊರೆಯುವ ಅಂಧಕಾರಕ್ಕೆ ಇಳಿಯುವ ಚಿತ್ರ ನಾಗಲೋಕ ಮತ್ತು ರೆಕ್ಕೆ ಬಿಚ್ಚಿ ಹಾರುವ ದೃಶ್ಯ ಎರಡು ರೂಪಗಳು ಚೈತನ್ಯದ ವಿರುದ್ಧಾತ್ಮಕ ಗುಣಗಳನ್ನು ಪ್ರತಿನಿಧಿಸುವಂಥವು. ಕವನದ ಮೊದ ಮೊದಲಿನ ರೂಪಕಗಳಲ್ಲಿ ಜೀವನ ವಿಧಾನವನ್ನು ವಿವರಿಸುತ್ತಾ ಹೋಗುವ ಕವಿಯು ಕೊನೆಗೆ ಉಪಮೆಗಳ ಮೂಲಕ ಜೀವನ ಸಮರಸದ ತಿಳುವಳಿಕೆ ವಿವರಗಳನ್ನು ಕೊಡಲು ಯತ್ನಿಸುತ್ತಾನೆ.

'ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಂಗಾಳಿಯಂತೆ'
ನಾನೆಂದರೂ ಒಂದೆ
ನಾನೆಂದರೂ ಒಂದೆ
ಹೊಂದುಗೂಡಿಕೆ ಇರದ ಜನಕೆ ನೊಂದೆ
ನೀನು ನನ್ನವಳೆಂದು ಬಳಿಗೆ ಬಂದೆ

(ಮನದನ್ನೆ)

'ಇಡಿಗಾಳಿ' ಪ್ರತಿಮೆ ಈ ಭಾಗದಲ್ಲಿ ಹೊಸಹುಟ್ಟಿಗೆ ಅವಕಾಶ ಮಾಡಿಕೊಡುವುದನ್ನು ಸೂಕ್ಷ್ಮವಾಗಿ ನಿರ್ದೇಶಿಸುತ್ತದೆ. ದಾಂಪತ್ಯದ ಸಮರಸದ ವಿಕಾಸಕ್ಕಾಗೆ ತಾಯಿಯ ಸ್ಥೈರಣೆ ಮತ್ತು ಮಮತೆಗಳು ಸತಿಯಲ್ಲಿ ಬರಲೆಂದು ಕವಿ ತನ್ನನ್ನು ತಾನು ಮಗುವಾಗುವ ನೆಲೆಗೆ ಸಿದ್ಧನಾಗಿದ್ದಾನೆ. ತಾಯಿಯ ಪ್ರತಿಮೆ ಹಲವು ಜೀವ ಚೈತನ್ಯಕ್ಕೆ ಪುಷ್ಟಿ ನೀಡುವಂತಿದೆ.

ಹೊಸಹುಟ್ಟು ಬರುವುದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿ ತಂದೆ

(ಮನದನ್ನೆ)

ಇಲ್ಲಿ ಮನಸ್ಸುಗಳ ಸಂಘರ್ಷಗಳು ದಾಂಪತ್ಯದ ಆಕರ್ಷಣೆಗೆ ಒಳಗಾಗಿ ಜೀವನ ಸಾಮರಸ್ಯವಾಗಬಹುದೆಂಬ ಆಶಾಕಿರಣದ ಜೊತೆಗೆ ಹೊಸಹುಟ್ಟು ದಾಂಪತ್ಯದ ಸಾಫಲ್ಯವನ್ನು ಬಿಂಬಿಸುತ್ತದೆ. ಈ ಕವನದುದ್ದಕ್ಕೂ ವಿರಸ ದಾಂಪತ್ಯದ ಚಿತ್ರವಿದ್ದರೂ ಅಂತ್ಯದಲ್ಲಿ ಸಮರಸದ ಅನಿವಾರ್ಯತೆಯನ್ನು ಕವಿ ಸೂಚಿಸಿದ್ದಾರೆ. ಅದೇ ನೈಜ ಬದುಕು.

ಹೀಗೆ ದಾಂಪತ್ಯದ ನಡುವಿನ ವೈರುಧ್ಯಗಳ ಸೃಷ್ಟಿಸುವ ನೋವಿನ ಛಾಯೆಗಳ ಸಂಕೀರ್ಣತೆ ಬೇಂದ್ರೆ

ಕಾವ್ಯ. ಗಂಡು ಹೆಣ್ಣಿನ ವಿಚಾರ ಮತ್ತು ಬದುಕುವ ರೀತಿಯಲ್ಲಿ ಉಂಟಾಗುವ ಸಮನ್ವಯತೆ ಹೃದಯಗಳ ಸಮ್ಮಿಲನ. ಪರಸ್ಪರ ಅರಿಯುವಿಕೆ ಮುಂತಾದ ನೆಲೆಗಳಿಂದ ಸಾಧಿಸಿಕೊಳ್ಳಬಹುದಾದ ಆಸೆ, ಆಕಾಂಕ್ಷೆಗಳು ಇವುಗಳಿಗೆ ಪೂರಕವಾದ ಅಂಶಗಳನ್ನು ಕಟ್ಟಿ ಕೊಡುವಲ್ಲಿ ಯಶಸ್ಸು ಕಂಡಿದ್ದಾರೆ.

ಈ ನಿಟ್ಟಿನಲ್ಲಿ ಗಮನಿಸಬಹುದಾದ ಕವನ 'ದೀಪ'. ಈ ಕವನದ ಟಿಪ್ಪಣಿಯಲ್ಲಿ ಹೇಳಿರುವಂತೆ 'ಫಾಲ್ಗುಣ ಪೂರ್ಣಿಮೆಯ ಸುಮಾರು ಗಂಗಾಓಘದಲ್ಲಿ ದೀಪವನ್ನು ಬಿಟ್ಟು ಅದು ತೇಲುವುದೋ, ಮುಳುಗುವುದೋ' ಎಂದು ಆಸೆಯಿಂದ ನಿರೀಕ್ಷಿಸುವ ದಂಪತಿಗಳಿಗೆ ಸಂಸಾರ ಪ್ರವಾಹದಲ್ಲಿ ಪ್ರೇಮದ ಗತಿಯೂ ಹೀಗೆ ಎಂದು ಒಮ್ಮೊಮ್ಮೆ ಹೊಳೆಯುವುದುಂಟು. ಆಕಾಶದಲ್ಲಿ ತುಂಬಿದ ಚಂದ್ರ, ಚಿಕ್ಕಿ, ಮೇರೆ ಮೀರಿ ನಾದ ಹೊಮ್ಮಿಸಿ ಹರಿವ ಗಂಗೆ, ಯಮುನೆ .... ಒಂದು ಹೊಸ ಬೆಳಕಿನ ಹಿನ್ನಲೆಯ ಶೃಂಗಾರ ಮಾಸದ ಪೂರೈಕೆಗಾಗಿ ಸಿದ್ಧವಾಗಿದೆ. ಕವನ ಇಂಥ ಶಬ್ದ ಚಿತ್ರಗಳಿಂದ ಸಮೃದ್ಧವಾಗಿದೆ. ದಂಪತಿಗಳ ಜೀವನ ಸಾಮರಸ್ಯದ ಆಶಾದಾಯಕ ನೆಲೆಗಳನ್ನು ಆಗು ಮಾಡುವ ಕ್ಷಣಗಳಿವು.

ನಾನು ನೀನು ಜೊತೆಗೆ ಬಂದು
ಈ ನದಿಗಳ ತಡಿಗೆ ನಿಂದು
ಸಾನುರಾಗದಿಂದ ಇಂದು
ದೀಪ ತೇಲಿಬಿಟ್ಟೆವೇ
ದೀಪ ತೇಲಿ ಬಿಟ್ಟೆವು..

(ದೀಪ)

ಕವನದ ಕೊನೆಯಲ್ಲಿ ಚಿತ್ರಗೊಂಡ ನಿರೂಪಕ ಆತನ ಪತ್ನಿ ಈ ಕ್ರಿಯೆಗೆ ಹಿನ್ನಲೆಯಾಗಿ ಬರುವ ನಿಸರ್ಗ ಪ್ರತಿಮೆಗಳು ಆಶಾದಾಯಕ ಏಕಾತ್ಮಕ ಸ್ವರೂಪದ ಭಾವವನ್ನು ಜಾಗೃತಗೊಳಿಸುವುದಾಗಿದೆ. ಈ ಕ್ರಿಯೆಯ ಹಿಂದೆ ಆತಂಕವಿಲ್ಲ, ಅನ್ಯೋನ್ಯತೆಯಿದೆ, ಆನಂದವಿದೆ. ಜೊತೆಗೆ ಬದುಕುವ ಭರವಸೆ ಇದೆ. ಇಲ್ಲಿಯ ನಿಸರ್ಗ ಪ್ರತಿಮೆಗಳು ಉಂಟುಮಾಡುವ ಅಲೌಕಿಕ ವಾತಾವರಣವು ದಂಪತಿಗಳ ಜೀವನ ಗುರಿಯ ಹುಡುಕಾಟದತ್ತ ಕಾಳಜಿ ವಹಿಸಿ ಸಾಧನೆ ಗಳಿಸುವ ಆದರ್ಶ ಒಡೆದು ತೋರಿದೆ.

'ಸಸಾರ ಅಲ್ಲವೋ ಸಂಸಾರ' ಜೀವದ ಗೆಳತಿ ಮುಂತಾದ ದಾಂಪತ್ಯದ ಚೌಕಟ್ಟಿನೊಳಗೆ ಕಂಡು ಬರುವ ಬೇಂದ್ರೆಯವರ ಪ್ರಮುಖ ಕವನಗಳಾಗಿವೆ. 'ಬರುವುದೇನೆ ನೆಪ್ಪಿಗೆ' ಎಂಬ ಕವನ ಸಖೀಗೀತಕ್ಕೆ ಪ್ರಸ್ತಾವನೆಯಾಗಿರುವ ಕವನ ಎಂಬ ಭಾವವನ್ನು ಟಿಪ್ಪಣಿಯಲ್ಲಿಯೇ ಗುರುತಿಸಿದ್ದಾರೆ.

ಇದುವರೆವಿಗಿನ ಬೇಂದ್ರೆಯವರ ಸರಸ ವಿರಸಕ್ಕೆ ಸಂಬಂಧಿಸಿದ ದಾಂಪತ್ಯ ಕಾವ್ಯದ ವಿವೇಚನೆಗೆ ಪೂರಕವಾಗಿ ಕೆ.ಎಸ್.ನರಸಿಂಹಸ್ವಾಮಿಯವರ ಕಾವ್ಯವನ್ನು ಅಧ್ಯಯನಕ್ಕೆ ಬಳಸಬಹುದು. ಮೈಸೂರು ಮಲ್ಲಿಗೆಯನ್ನು ತಂಗಾಳಿಯೊಡ್ಡಿದ ಕೆ.ಎಸ್.ನರವರ ಪ್ರತಿಭೆ ಅಪ್ಸರೆಯಂತೆ ಈ ಲಾವಣ್ಯವು ಮಣ್ಣು ನೆಲದಿಂದ ಬಂದುದಲ್ಲ ಎನಿಸಿಬಿಟ್ಟಿದೆ ಎಂದು ಬೇಂದ್ರೆಯವರು, ಮೈಸೂರು ಮಲ್ಲಿಗೆ ಕಸ್ತೂರಿ ನೆಲದಲ್ಲಿ ಕಾಮನ

ಬಿಲ್ಲನು ಬಿತ್ತಿ ಬೆಳೆಸಿದ ಹೂದೋಟ ಎಂದು ಡಿ.ಎಲ್.ಎಸ್.ರವರು ಪ್ರಶಂಸಿದ್ದಾರೆ. ಮೈಸೂರು ಮಲ್ಲಿಗೆಯಿಂದ ಹಿಡಿದು ಐರಾವತ, ಇರುವಂತಿಗೆ, ದೀಪದಮಲ್ಲಿ, ಉಂಗುರ... ಇತ್ಯಾದಿ ಕವನ ಸಂಗ್ರಹಗಳವರೆಗೆ ಹಬ್ಬಿನಿಂತ ಅವರ ಚೆಲುವಿನ, ಒಲವಿನ, ಕವಿತೆಗಳು ರಸಿಕರ ಮನಸ್ಸನ್ನು ಇವತ್ತೂ ಸೂರೆಗೊಳ್ಳುತ್ತಿವೆ. ಅವರ ಕವಿತೆಗಳು ಬದುಕಿನ ಸುಕುಮಾರ ಮುಖವನ್ನು ಚಿತ್ರಿಸುತ್ತಾ ಉಳಿದ ಅಂಶಗಳನ್ನು ಕಡೆಗಣಿಸುವ ಪರಿಮಿತಿಗೆ ಒಳಗಾಗಿವೆ ಎಂಬ ವಿಮರ್ಶಕರ ಅಭಿಪ್ರಾಯವನ್ನು ಗಮನಿಸಿದರೂ ಅವರ ಕವಿತೆಗಳ ಪ್ರಾಮಾಣಿಕತೆಯನ್ನಾಗಲಿ ಅಭಿವ್ಯಕ್ತಿಯ ಕೌಶಲ್ಯವನ್ನಾಗಲಿ ಮೆಚ್ಚದಿರಲು ಸಾಧ್ಯವಿಲ್ಲ.

ಇವರ ಕವಿತೆಗಳು ಬದುಕಿನ ಎಲ್ಲ ರೀತಿಯ ಅನುಭವಗಳ ಅಭಿವ್ಯಕ್ತಿಯೇ ಆದರೂ ಅದರಲ್ಲಿ ಒಲವಿನ ಚೆಲುವಿನ ಅನುಭವಕ್ಕೆ ಮೊದಲ ಸ್ಥಾನ. ಬದುಕಿನಲ್ಲಿ ಬರುವುದು ಬರೀ ಸುಖವೊಂದೇ ದುಃಖವೆಂಬುದಿಲ್ಲ ಅಥವಾ ಇದ್ದರೂ ತಮ್ಮ ಅನುಭವಕ್ಕೆ ಬಂದಿಲ್ಲ ಎನ್ನುವುದು ಅವರ ಅಭಿಪ್ರಾಯವಲ್ಲ. ಅವರೇ ಒಂದೆಡೆ

ದುಃಖಮಯವೀ ಬದುಕು ಎನ್ನುವವ ಕವಿಯೆ
ಸುಖವೆಂಬುದಿಲ್ಲವೇ ದುಃಖದನುಭವಿಗೆ
ದುಃಖ ದಿನದಿನ ಬಂದು ಇರಿದಿರಿದು ಪೋಗೆ
ಹರ್ಷ ವರ್ಷಕ್ಕೊಮ್ಮೆ ಇಣಿಕಿಣಿಕಿ ನೋಡೆ
ಬದುಕಿಗೂ ಸಾವಿಗೂ ನಡುವೆ ನಿಂದು
ಈ ಭೂಮಿ ಈ ಚೆಲುವು ನಮ್ಮದೆಂದು
ಹೊತ್ತಹೊರೆ ಬಲು ಹಗುರವೆನ್ನದವ ಕವಿಯೆ

ಐರಾವತ

ಎಂದು ಹೇಳುತ್ತಾರೆ.

ಕೆ.ಎಸ್.ನರವರ ಪ್ರಣಯದ ವಸ್ತು ನವದಾಂಪತ್ಯ ಹರೆಯ ಕುರಿತದ್ದು. ಇವರ ಮೊದಲ ಸಂಕಲನ ಮೈಸೂರು ಮಲ್ಲಿಗೆಯಲ್ಲಿ ಈ ಹೊಸ ಹರೆಯದ ಬೆರಗು ಮಿರುಗುತ್ತದೆ.

ನನ್ನವಳು ನನ್ನೆದೆಯ ಹೊನ್ನಾಡನಾಳುವಳು
ಬೆಳಗುಗೆನ್ನೆಯ ಚೆನ್ನೆ ನನ್ನ ಮಡದಿ
ಹೊಳೆಯ ಸುಳಿಗಳಿಗಿಂತ ಆಳ ಕಣ್ಣಿನ ಚೆಲುವು
ಅವಳೊಮ್ಮೆ ಹೆರಳ ಕೆದರಿ
ಕಪ್ಪುಗುರುಳನ್ನು ಬೆನ್ನ ಮೇಲೆಲ್ಲ ಹರಡಿದರೆ
ದೂರದಲಿ ಗಿರಿಯ ಮೇಲೆ
ಇಳಿದಂತೆ ಇರುಳ ಮಾಲೆ (ಗೃಹಲಕ್ಷ್ಮಿ)

ಈ ವರ್ಣನೆ ಪಾರಂಪರಿಕ ವರ್ಣನೆಗಿಂತ ಭಿನ್ನವಾದುದು. ಭಾವ ಸೂಕ್ಷ್ಮವನ್ನು ಹೊಂದಿರುವ ಈ ಚಿತ್ರ ಸಹಜವಾಗಿಯೇ ಪರಿಶುದ್ಧ ಅಭಿರುಚಿಯನ್ನು ಮನಸ್ಸಿಗೆ ತರುತ್ತದೆ.

ದಾಂಪತ್ಯದ ಆರಂಭದ ಪರಿಸರವನ್ನು ಬಿಂಬಿಸುವ ಮತ್ತೊಂದು ಕವನ ಬಾರೆ ನನ್ನ ಶಾರದೆ

ಮದುವೆಯಾಗಿ ತಿಂಗಳಿಲ್ಲ
ನೋಡಿರಣ್ಣ ಹೇಗಿದೆ
ನಾನು ಕೂಗಿದಾಗಲೆಲ್ಲಾ
ಬರುವಳೆನ್ನ ಶಾರದೆ
ಹಿಂದು ಮುಂದೆ ನೋಡದೆ
ಎದುರು ಮಾತನಾಡದೆ

(ಬಾರೆ ನನ್ನ ಶಾರದೆ)

ಈ ಕವಿತೆಯ ವಸ್ತು ಸ್ಥಿತಿಯನ್ನು ಹೇಳುತ್ತಾ ಮುಂದೆ ತಾತ್ವಿಕವಾಗುತ್ತದೆ ಎಂಬುದನ್ನು ಅರಿಯಬಹುದು.

ಬದುಕು ನೆಳಲ ಬಿಸಿಲದಾರಿ
ಮಿತ್ತು ಕಳ್ಳ ಬೆಕ್ಕಿನಂತೆ
ಹೊಂಚುತಿಹುದು ಯಾರ ದಾರಿ
ಗೆಲ್ಲಿ ಕೊನೆಯೊ ಇಂದಿನಂತೆ
ನಾಳೆ ಎನ್ನಲಾಗದು
ಇತ್ತ ಸಿರಿಯು ನಿಲ್ಲದು
ಮತ್ತೆ ಎಲ್ಲ ದೊರಕದು.

ಸಾವಿನ ನೆಳಲು ಸದಾ ಬದುಕನ್ನು ಹಿಂಬಾಲಿಸುವುದರಿಂದ ಶಾಶ್ವತವಲ್ಲವಾದರೂ ಬದುಕನ್ನು ಸವಿಯುವುದಕ್ಕೆ ಕರೆ ಕೊಡುತ್ತದೆ. ಸಂಸಾರದಲ್ಲಿ ಸವಿ ಹೊಂದಾಣಿಕೆ ಸಾಮರಸ್ಯ ಇರಲಿ ಎನ್ನುವುದು ಕವನದ ಉದ್ದೇಶ.

ಮದುವೆಯಾದ ಮೊದಲ ದಿನಗಳ ಉತ್ಸಾಹ, ಸಂಭ್ರಮ, ಕಾತರ, ಜಾಣ್ಮೆ.. ಇತ್ಯಾದಿಗಳನ್ನು ಕೆ.ಎಸ್.ನರವರು ಹಿಡಿದಿರಿಸಿದ್ದಾರೆ. ತನ್ನ ನಲ್ಲೆಯ ಮನೆಯಿಂದ ಹೊರಡಲಾರದೆ ಹೊರಟು ಎಂದು ಬರುವಿರಿ ಎಂಬ ಅವಳ ಪ್ರಶ್ನೆಗೆ ಇನ್ನೊಂದು ತಿಂಗಳಲ್ಲಿ ಎಂದು ಹೇಳಿ, ತಡಮಾಡಿ ರೈಲು ತಪ್ಪಿಸಿಕೊಂಡ ನಲ್ಲನನ್ನು ಕಂಡು ಹೊಸ ಹೆಣ್ಣು ತಿಂಗಳಾಯಿತೆ ಎಂದು ಕೇಳುವಲ್ಲಿನ ಜಾಣ್ಮೆ (ತಿಂಗಳಾಯಿತೆ ಮೈಸೂರು ಮಲ್ಲಿಗೆ) ಒಂದು ಹುಣ್ಣಿಮೆಯಿರುಳು ನಲ್ಲೆಯ ಮನೆಗೆ ಬಂದ ರಾಯರು ಮಡದಿ ಒಳಗಿಲ್ಲದ ಕಾರಣ ಮಾವ ನಾದಿನಿಯರ ಆತಿಥ್ಯದಿಂದ ಅನುಭವಿಸಿದ ಪೇಚಾಟ. (ಮಾವನ ಮನೆಯಲ್ಲಿ ಮೈಸೂರು ಮಲ್ಲಿಗೆ) ಒಂದಿರುಳು ತನ್ನ ಮಡದಿಯನ್ನು ಕುರಿತು ನಮ್ಮೂರು ಚೆಂದವೋ, ನಿಮ್ಮೂರು ಚೆಂದವೋ ಎಂದು ಪ್ರಶ್ನಿಸುವ ಸೊಗಸು. (ಪ್ರಶ್ನೆಗೆ ಉತ್ತರ ಮೈಸೂರು ಮಲ್ಲಿಗೆ) ಹಳೆಯ ನೆನಪನ್ನು ಮರಕಳಿಸುತ್ತಾಳೆ. ಹತ್ತು ವರ್ಷದ ಹಿಂದೆ

ಮುತ್ತೂರು ತೇರಿನಲ್ಲಿ ಅತ್ತಿತ್ತ ಅಲೆದವರು ನೀವಲ್ಲವೇ (ನೀವಲ್ಲವೇ ಐರಾವತ) ಎಂದು ನೆನಪಿಸಿಕೊಂಡು ಗಂಡನ ಸ್ವಭಾವವನ್ನು ಲೇವಡಿ ಮಾಡುವ ತುಂಟತನ ಇಂತಹ ಕವಿತೆಗಳಲ್ಲಿನ ಸರಸ ದಾಂಪತ್ಯದ ಪರಿಕಲ್ಪನೆಯನ್ನು ಪ್ರತಿಬಿಂಬಿಸುತ್ತವೆ. ಹಾಗಾಯೇ ವಿರಸ ದಾಂಪತ್ಯದ ಚಿತ್ರಣಗಳನ್ನೊಳಗೊಂಡ ಕೆಲವು ಕವಿತೆಗಳನ್ನು ಗಮನಿಸಿದಾಗ ಈ ಹಿನ್ನಲೆಯಲ್ಲಿ ರಚಿತವಾದ ಕವನ ಬಳೆಗಾರನ ಹಾಡು. ಇದು ಒಂದು ಸಂಸ್ಕೃತಿಯನ್ನು ದಾಖಲಿಸುವುದರ ಜೊತೆಗೆ ಗಂಡ ತನ್ನ ಗರ್ಭಿಣಿ ಹೆಂಡತಿಯನ್ನು ನೋಡಲು ಹೋಗಿರುವುದಿಲ್ಲ. ಈ ಹಿನ್ನಲೆಯಲ್ಲಿ ಆಕೆಯ ವೇದನೆಯನ್ನು ಬಳೆಗಾರನ ಮೂಲಕ ಗಂಡನಿಗೆ ತಿಳಿಸುವ ರೀತಿಯಲ್ಲಿ ಅಭಿವ್ಯಕ್ತಿಯಿದೆ.

ಸಿರಿಗೌರಿಯಂತೆ ಬಂದರು ತಾಯಿ ಹಸಮಣೆಗೆ
ಸೆರಗಿನ ಕಣ್ಣೀರನೊರಸಿ
ಸುಖದೊಳಗೆ ನಿಮ್ಮ ನೆನೆದರು ತಾಯಿ ಗುಣವಂತೆ
ದೀಪದಲಿ ಬಿಡುಗಣ್ಣ ನಿಲಿಸಿ

ಗಂಡನ ಗೈರುಹಾಜರಿಯಲ್ಲಿ ಸಡಗರಕ್ಕೆ ಒಳಗಾಗಬೇಕಾದ ಪರಿಸ್ಥಿತಿಯಲ್ಲಿ ಕಣ್ಣೀರನ್ನೊರಸಿಕೊಂಡದ್ದು ಸಹಜ ಆಗಿದೆ. ಹಾಗೆಯೇ ಸುಖದೊಳಗೆ ನಿಮ್ಮ ನೆನದರು ತಾಯಿ ಎಂಬ ಮಾತು ಗಂಡನ ಪರವಾದ ಅವಳ ನಿಲುವನ್ನು ವಾದಿಸುವಂತೆ ತೋರುತ್ತಾ ಅವನನ್ನು ಮೆದುಗೊಳಿಸಿ, ಆ ಕಡೆಗೆ ಸೆಳೆಯುವ ತಂತ್ರವನ್ನು ಹೇಳುವಂತಿದೆ. ಮುಂದಿನ ಮಾತುಗಳು ಅವಳ ಆಪ್ತಭಾವದ ಸಶಕ್ತ ಅಭಿವ್ಯಕ್ತಿ ಹಿಂಡಬಾರದು ದುಂಡು ಮಲ್ಲಿಗೆಯ ದಂಡೆಯನು ಒಣಗಬಾರದು ಒಡಲ ಚಿಲುಮೆ ಎಂಬುದು. ಅವಳಿಗೆ ಅವನದೆ ಕನವರಿಕೆ ಎಂಬುದನ್ನು ಸಮರ್ಥಿಸಲು ಬಂದಿದೆ. ಅಗಲಿಕೆಯಿಂದ ವಿರಹ, ವಿರಹದಿಂದ ನಿರುತ್ಸಾಹ ಉಂಟಾಗಬಾರದೆಂಬ ಅಂಶ ಇಲ್ಲಿ ಆಗಿದೆ.

ತೌರೂರಿನಿಂದ ಬರುವ ಮಡದಿಗಾಗಿ ಇರುಳು ರೈಲು ನಿಲ್ದಾಣದಲ್ಲಿ ಕಾದು ಪರಿತಪಿಸುವ ಕಾತರ. ಅರಸಿಕೆರೆಯಲ್ಲಿ ತೌರಿನಿಂದ ಮನೆಗೆ ಬಂದ ಮಡದಿ ಮನೆಯ ಅವ್ಯವಸ್ಥೆಯನ್ನು ಕಂಡು ಪ್ರಶ್ನಿಸುವ ರೀತಿ ಮಂಗಳವೆ ಮನೆಗೆ ಈ ಪಾಡು ಐರಾವತ ಮನೆಗೆ ತಡಮಾಡಿ ಬಂದ ಗಂಡನನ್ನು ಕುರಿತು ತಪ್ಪಲೆ ತುಂಬ ನಕ್ಷತ್ರದೊಲು ಬಿರಿದನ್ನ ಆರಿ ಅಕ್ಷತೆಯಾದ ಮೇಲೆ ಈಗ ಸರಿಹೊತ್ತಿಲಿ ಬಂದಿರ (ಅಪರಾಧಿ ದೀಪದಮಲ್ಲಿ) ಎಂದು ಆಕ್ಷೇಪಿಸುವ ವೈಖರಿ. ಇಂತಹ ಕವನಗಳು ವಿರಸದ ಚಿತ್ರಣಗಳೆಂಬಂತೆ ತೋರಿದರೂ, ಬದುಕಿನಲ್ಲಿ ಸಹಜತೆಯಿಂದ ಮೂಡುವ ಪ್ರಶ್ನೆಗಳು ತಿರಸ್ಕಾರ, ವಿಷಾದ ಭಾವಗಳು ಪ್ರಮುಖವಾಗದೆ ಸಾಂದರ್ಭಿಕ ಮನೋಭಿತ್ತಿಗಳ ಅಭಿವ್ಯಕ್ತಿ ಅಷ್ಟೇ.

ಇವರ ಕವನಗಳಲ್ಲಿ ಪ್ರಣಯ ಹೊರತು, ಪ್ರಣಯ ಚಿಂತನೆಯಲ್ಲ ಎಂಬ ರಾಷ್ಟ್ರಕವಿ ಜಿ.ಎಸ್ ಶಿವರುದ್ರಪ್ಪನವರ ಮಾತಿನಂತೆ ಸಾಂಸಾರಿಕ ಜೀವನದಲ್ಲಿನ ಸಂಘರ್ಷಗಳಾಗಲಿ, ನೋವುಗಳಾಗಲಿ ತೀವ್ರವಾಗಿ ಬಂದಿಲ್ಲ. ವಾಚ್ಯ ನೆಲೆಯ ಪ್ರಣಯ ವಿನೋದಗಳು ಉನ್ಮಾದ ಉಕ್ಕಿಸುತ್ತವೆಯೋ ಹೊರತು, ಆಳವಾದ ಚಿಂತನೆಗೆ ಪ್ರಣಯುವನ್ನು ಕೊಂಡೊಯ್ಯುವುದಿಲ್ಲ. ಅದರ ಅಗತ್ಯ ಕೆ.ಎಸ್‌ನ.ಗೆ ಇಲ್ಲ. ಅದು ಬೇಂದ್ರೆಯವರಂಥವರಿಗೆ ಮಾತ್ರ. ಪ್ರಣಯದ ಸುಖ ಮತ್ತು ಅದರ ಆಳ ಚಿಂತನೆ ಎರಡೂ ಇವೆ.

ಬೇಂದ್ರೆಯವರಲ್ಲಿನ 'ಮನದನ್ನೆ' 'ನೀ ಹಿಂಗ ನೋಡಬ್ಯಾಡ' 'ನನ್ನ ಹಳ್ಳದ ದಂಡ್ಯಾಗ' ಮುಂತಾದ ಕವನಗಳಲ್ಲಿನ ಹೆಣ್ಣಿನ ಮಾನಸಿಕ ಅಘಾತ, ಹೊಯ್ದಾಟ, ದಾರುಣತೆಗಳ ಚಿತ್ರಣ ಕೆ.ಎಸ್.ನ.ರವರ ಕವನಗಳಲ್ಲಿನ ಭಾವನಾತ್ಮಕ ಸಂಬಂಧ ವಿವರಗಳಲ್ಲಿ ಕಂಡು ಬರುವುದಿಲ್ಲ.

ದಾಂಪತ್ಯ ಜೀವನ ಕುರಿತ ಕೆಲವು ಕವಿತೆಗಳಲ್ಲಿ ಕೆ.ಎಸ್.ನ ರವರು ಕುಟುಂಬದ ಆವರಣದೊಳಗಿನ ಸಂಗತಿಗಳನ್ನು ಸಾಮಾಜಿಕರಣಗೊಳಿಸುವ ಕಡೆ ಗಮನಕೊಡುವುದಿಲ್ಲವಾದರೂ ಅವುಗಳು ಸಮಾಜದ ಕವಿತೆಗಳು ವ್ಯಕ್ತಿತ್ವದ ಹೆಗ್ಗುರುತುಗಳು ಆರಂಭಿಕ ನೆಲೆ, ಕುಟುಂಬ ಮನುಷ್ಯ ಹುಟ್ಟುತ್ತಲೇ ಅವನಲ್ಲಿ ವ್ಯಯಕ್ತಿಕತೆ ಎಂಬ ಪ್ರಶ್ನೆ ಬರುವುದಿಲ್ಲ ಇಂತಹ ಚಿಂತನೆಗಳು ಕಾಡಿದ್ದು ನವ್ಯಕವಿಗಳನ್ನು ಮಾತ್ರ ಸಾಮಾಜಿಕ ಸಂಘರ್ಷಗಳಿಗೆ ಇಲ್ಲಿ ದಾರಿ ಮಾಡಿಕೊಟ್ಟಿಲ್ಲ. ಆದರೆ ಬದುಕಿನಲ್ಲಿ ಸುಪ್ತವಾಗಿರುವ ಸಂತೋಷ, ಸಡಗರ, ಜೀವನದ ಆಳಕ್ಕಿಳಿದಷ್ಟು ಸತ್ಯದ ಅನ್ವೇಷಣೆ ಹಾಗೂ ಅದರ ಸಾಕ್ಷಾತ್ಕಾರ ಸಾಧ್ಯ, ಸತ್ಯದ ದರುಶನ ಭಾಗ್ಯದಿಂದ ದೊರೆಯುವುದು ರಾಗ ಭಾವಗಳು ಮಾತ್ರ ಸುಪ್ತವಾಗಿರುವ ದ್ವೇಷವನ್ನು ಒಂದೆಡೆ ಒತ್ತರಿಸಿ ಸುಪ್ತವಾಗಿರುವ ಪ್ರೀತಿಯನ್ನು ಹೊರೆಗೆಳೆಯುವ ಕಾವ್ಯಮಯ ಚಿಂತನೆ ಇಲ್ಲಿ ಕಾಣಬಹುದಾಗಿದೆ.

ಆದರೂ ಕೆ.ಎಸ್.ನ. ಅವರು ದಾಂಪತ್ಯ ಜೀವನವನ್ನು ಕುರಿತ ಕೆಲವು ಕವಿತೆಗಳಲ್ಲಿ ವೈಯುಕ್ತಿಕ, ಸಾಮಾಜಿಕ ಸಂಘರ್ಷಗಳು ಕಾಣುವುದಿಲ್ಲವಾದರೂ, ಅವುಗಳಲ್ಲಿ ಬೇರೆಯೆ ತಾತ್ತ್ವಿಕ ಅರ್ಥವನ್ನು ಬದುಕಿನ ಆಳವಾದ ಸತ್ಯಗಳನ್ನು ಧ್ವನಿಸುವ ಚಿತ್ರಣವನ್ನು ಕಾಣಬಹುದಾಗಿದೆ. ಹೆಂಡತಿಯ ಕಾಗದ ತೌರಸುಖದೊಳೆನ್ನ ಮರೆತಿಹಳು ಎನ್ನದಿರಿ ಎಂಬ ಪೀಠಿಕೆಯೊಂದಿಗೆ ಪ್ರಾರಂಭವಾದ ಪತ್ರದಲ್ಲಿ

ಬೃಂದಾವನದ ಹಣೆಗೆ ಕುಂಕುಮವನಿಡುವಾಗ
ಕಾಣುವವು ಶ್ರೀ ತುಳಸಿ ಕೃಷ್ಣ ತುಳಸಿ
ನೀಲಾರಂಬದ ನಡುವೆ ಚಂದಿರನು ಬಂದಾಗ
ರೋಣಿಯು ಬೆಳಗುವಳು ಸನ್ನಿಧಿಯಲಿ[1]

ಎಂಬ ಮಾತಿನಲ್ಲಿ ಭಾರತೀಯಳಾದ ಹಳ್ಳಿಯ ಹೆಣ್ಣು ಮಗಳ ಮನಸ್ಸಿನಲ್ಲಿ ನಿಜವಾದ ದಾಂಪತ್ಯ ಪ್ರೇಮದ ಅರ್ಥ ಎಷ್ಟೊಂದು ಪರಂಪರಾನುಗತವಾದ ಸಂಕೇತಗಳ ಮೂಲಕ ನೆಲೆಯಾಗಿದೆ ಎನ್ನುವುದು ಇಲ್ಲಿರುವ ಸ್ವಾರಸ್ಯ. ಬೆಳಗಿನ ಜಾವ ಬೃಂದಾವನದ ಹಣೆಗೆ ಕುಂಕುಮವನ್ನಿಡುವಾಗ ಈ ಧಾರ್ಮಿಕ ವಿಧಿಯ ಜೊತೆಯಲ್ಲೇ, ಅಲ್ಲಿ ಶ್ರೀ ತುಳಸಿ, ಕೃಷ್ಣ ತುಳಸಿಗಳನ್ನು ಕಂಡು ದಾಂಪತ್ಯ ಪ್ರೇಮದ ಅರ್ಥವಂತಿಕೆಯನ್ನು ನೆನೆಯುತ್ತಾ, ಇರುಳ ಚಂದಿರನ ಜೊತೆಗೆ ರೋಹಿಣಿಯನ್ನು ಕಾಣುವ ಈ ಹೆಣ್ಣು ತಮ್ಮ ದಾಂಪತ್ಯವೂ ಈ ರೀತಿಯದಾಗಿರಬೇಕೆಂದು ಆಶಿಸುವುದರ ಜೊತೆಗೆ ತೌರೂರಿಗೆ ಬಂದು ನೆಲೆಸಿರುವ ತನ್ನ ಏಕಾಕಿತನದಲ್ಲೂ ತನಗೆ ಗಂಡನ ಬಗೆಗಿರುವ ಒಲುಮೆಯ ತೀವ್ರತೆಯನ್ನು ಹೇಳಿರುವ ರೀತಿ ತುಂಬಾ ಸೊಗಸಾಗಿದೆ. ಒಂದು ಧಾರ್ಮಿಕವಾದ ದೈನಂದಿನ ಆಚರಣೆಯ ಸಂಕೇತದಲ್ಲಿ ನಿಜವಾದ ದಾಂಪತ್ಯ ಪ್ರೇಮದ ಬೆಸುಗೆಯನ್ನು ಧ್ವನಿಸುತ್ತದೆ.

ಒಂದು ಮನೆಯಲ್ಲಿ ಹುಟ್ಟಿ ಮತ್ತೊಂದು ಮನೆಯನ್ನು ಬೆಳಗಬೇಕಾದ ಹೆಣ್ಣನ್ನು ಕುರಿತು



೧ ಹೆಂಡತಿಯ ಕಾಗದ ಮಾ.ಮ.ಪುಟ ೩೩

ಹುಟ್ಟಿದುದು ಬೆಟ್ಟದಲ್ಲಿ ಹರಿಯುವುದು ಬಯಲಿನಲಿ
ತುಂಬು ಹೊಳೆ ನಾಡ ನಗಿಸಿ

(ಒಬ್ಬಳೆ ಮಗಳು ಮಲ್ಲಿಗೆ ಮಾಲೆ)

ಎಂದೇ ಒಬ್ಬಳೆ ಮಗಳ ಅಗಲಿಕೆಯಿಂದ ಮಾವನಿಗೆ ಅಳಿಯ ಹೇಳುವ ಈ ಸಮಾಧಾನದ ಮಾತಿನಲ್ಲಿ ನಿಸರ್ಗದ ವ್ಯಾಪಾರದೊಂದಿಗೆ ಹೆಣ್ಣಿನ ಬದುಕನ್ನು ಸಹಜವಾಗಿ ಸಮೀಕರಿಸುವ ಈ ಪ್ರತಿಮೆ. ಹೆಣ್ಣಿನ ಬಗೆಗೆ ಭಾರತೀಯ ಪರಂಪರೆಯಲ್ಲಿರುವ ಹಲವು ಗೌರವ ಭಾವನಗಳನ್ನು ಲಾಲನೆ, ಪಾಲನೆ, ಪೋಷಣೆ, ಅಗತ್ಯತೆಯನ್ನು ಒತ್ತಿ ಹೇಳಿವೆ. ಹರಿಯುವ ಹೊಳೆ ದಾರಿಯುದ್ದಕ್ಕೂ ಹರಿದು ಸಸ್ಯ ಸಮೃದ್ಧಿಗೊಳಿಸುವ ಈ ಕ್ರಿಯೆ ಹೆಣ್ಣಿನ ಬದುಕಿಗೆ ಪ್ರತಿಮೆಯಾಗಿರುವುದು ಅತ್ಯಂತ ಅರ್ಥಪೂರ್ಣವಾಗಿದೆ.

ಕೆ.ಎಸ್.ನ. ಅವರ ಮತ್ತೊಂದು ಕವಿತೆ ತುಂಗಭದ್ರೆಯಲ್ಲಿ ಸಂಸಾರವನ್ನು ಒಂದು ಸಾಗರಕ್ಕೆ ಹೋಲಿಸಿ, ಗಂಡು ಒಂದು ದಡವಾದರೆ, ಹೆಣ್ಣು ಮತ್ತೊಂದು ದಡ ಎಂದು ಹೇಳಿ, ಈ ದಡಗಳ ನಡುವೆ ಮನೆಯ ಮಗು ಹಡಗಿನಂತೆ ಓಡಾಡುತ್ತದೆ ಎನ್ನುತ್ತಾರೆ. ಅಷ್ಟೇಲ್ಲ ಈ ಮಗುವಿಗೆ ಒಂದು ದಡ ಗದರಿದರೆ ಇನ್ನೊಂದು ದಡವಿಹುದು ಎಂಬ ನಂಬಿಕೆಯಿದೆ. ಈ ಮಗುವಿಗಿರುವ ಸರಳವಾದ ನಂಬಿಕೆ ನನಗಿಲ್ಲ. ನನ್ನ ಎಷ್ಟೋ ಬಾಳಿಗೆ ಇಲ್ಲ ಎಂದು ಮೇಲ್ನೋಟಕ್ಕೆ ಹೇಳಿಕೆಯಂತೆ ತೋರುವ ಈ ಮಾತು ಕಾವ್ಯದ ಪರಿಸರದಲ್ಲಿ ನಂಬಿಕೆಗಳನ್ನು ತೂಗಿನೋಡುವ ಚಿಂತನೆಯಾಗಿ ಎಂಥ ಆಳವಾದ ಸತ್ಯವನ್ನು ಧ್ವನಿಸುತ್ತದೆ.

ದಾಂಪತ್ಯ ಬದುಕಿನಲ್ಲಿ ಆಗಾಗ ಬಂದು ಹೋಗುವ ಸಿನಿಕತನ ಬೇಸರ, ಜಗಳ ಮತ್ತೆ ವಿಡಂಬನೆ, ಸಲ್ಲಾಪ, ಸಡಗರ ನಂತರ ಬೆಸುಗೆ. ಈ ಕ್ರಿಯೆಗಳಿಗೆ ತುಂಗಭದ್ರೆ ಸೇತುವೆಯಾಗುವ ವಾಸ್ತವತೆಯನ್ನು ಕವಿತೆ ಸಾರುತ್ತದೆ. ಜೊತೆಗೆ ಮಗುವಿನ ಅವಲಂಬನೆ ಆ ಎರಡು ದಡಗಳಲ್ಲೇ ಸುತ್ತುವುದು ಮುಗ್ಧ ಪ್ರಪಂಚದ ಮೊದ್ದು ತಿಳಿವಳಿಕೆಯಷ್ಟೆ.

ಇರುವಂತಿಗೆ ಸಂಗ್ರಹದಲ್ಲಿನ ಸಣ್ಣಸಂಗತಿ ಎಂಬ ಕವಿತೆ ತಾಯ ಪಕ್ಕದಲ್ಲಿ ಮಗು ಮಲಗಿರುವಾಗ ನಟ್ಟಿರುಳು ತನ್ನ ಹೊದಿಕೆಯನ್ನು ಸರಿಪಡಿಸುವ ಸಣ್ಣ ಸಂಗತಿಯನ್ನು ಹೇಳುತ್ತದೆ.

ನಿದ್ದೆಗಣ್ಣಿನಲೆ ಪಕ್ಕದ ತಾಯಿ ಕೈ ನೀಡಿ
ಮತ್ತೆ ಹೊದಿಕೆಯನು ಸರಿಪಡಿಸುವಳು ಮಗು ತಿರುಗಿ
ಹೊದಿಕೆಯನೆ ಕಿತ್ತೆಸೆದು ಮಲಗುವುದು ಬರಿಮೈಲಿ
ಸಣ್ಣಗಿದೆ ದೀಪ ಎಲ್ಲೋ ಒಂದು ಮೂಲೆಯಲಿ

(ಸಣ್ಣಸಂಗತಿ ಮಲ್ಲಿಗೆ ಮಾಲೆ)

ಸಣ್ಣ ಸಂಗತಿ ಕವಿತೆಯ ಈ ಭಾಗದ ಚಿತ್ರದಲ್ಲಿ ಆಕಾಶಕ್ಕೆ ಹುಣ್ಣಿಮೆಯ ಕಣ್ಣು, ತೆರೆದ ಬಾಗಿನ ಚಂದ್ರ ಬಂದ. ಸೋನೆಯ ಶ್ರುತಿಗೆ ಗಾಳಿಗೆ ಹಾಡುವ ಪ್ರಾಕೃತಿಕ ಘಟನೆಗಳ ಚೌಕಟ್ಟಿನೊಳಗೆ ಮತ್ತು ಆ ದೊಡ್ಡ ಘಟನೆಗಳೊಂದಿಗೆ ಮನೆಯೊಳಗೆ ಮಲಗಿದ ಮಗು ಹೊದಿಕೆಯನ್ನು ಕಿತ್ತೆಸೆಯುವ ಮತ್ತು ತಾಯಿಯ

ಕೈ ಹೊದಿಕೆಯನ್ನು ಸರಿಪಡಿಸುವ ಸಣ್ಣ ಸಂಗತಿ ಯನ್ನು ವರ್ಣಿಸಲಾಗಿದೆ. ಆದರೆ ಈ ಸಣ್ಣ ಸಂಗತಿ ವಾಸ್ತವವಾಗಿ ಸದಾ ಕಾಲ ಕಾಪಾಡುವ ಕರುಣೆಯೊಂದರ ಸಂಕೇತದಂತೆ ಮುಂದಿನ ಭಾಗದ ವಾಚ್ಯದ ಮುಕ್ತಾಯ ಕವಿತೆಗೆ ಶೋಭೆ ತರುವಂತಿಲ್ಲ.

ಇದು ಸರಿಯೆ ತಪ್ಪೆ ಉತ್ತರವಿಲ್ಲ ದೆಸೆದೆಸೆಗೆ
ಎಲ್ಲ ಮಲಗಿಹರು ಮಾತಾಡದೆಯೆ ನೋಡದೆಯೆ
ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿಯುತಿದೆ
ಅದನು ಲೆಕ್ಕಿಸದೆ ಮಗು ಹೊದಿಕೆಯನು ಒದೆಯುತಿದೆ.

(ಸಣ್ಣಸಂಗತಿ-ಮಲ್ಲಿಗೆ ಮಾಲೆ)

ಈ ವಾಚ್ಯದ ವಿವರಣೆಯ ಮಾತುಗಳಲ್ಲದಿದ್ದರೆ ಈ ಕವಿತೆ ತುಂಬ ಗಹನವಾದ ತತ್ವದ ಸಂಕೇತವಾಗಬಹುದಿತ್ತು. ಈ ಸಂಕೇತಿಕತೆಯೇ ಕವನದ ಯಶಸ್ಸಿಗೆ ಕಾರಣವಾಗಬಹುದಿತ್ತು. 'ಹೀಗಾಯಿತು' (ದೀಪದಮಲ್ಲಿ) ಎಂಬ ಕವಿತೆಯಲ್ಲಿ ಗಂಡನ ಮನೆಯಲ್ಲಿ ಇಲ್ಲದೆಯಿರುವಾಗ ಅವರನ್ನು ಕೇಳಿಕೊಂಡು ಯಾರೋ ಬಂದು ಹೋಗುತ್ತಾರೆ. ಸಂಜೆ ಗಂಡ ಬಂದಾಗ ಆ ಸಂಗತಿಯನ್ನು ತಿಳಿದ ಗಂಡ ಬಂದವರು ಯಾರು ಎಂದು ಹೆಂಡತಿಯನ್ನು ಕೇಳಿದಾಗ, ಆಕೆ..

ಇನ್ನು ನನ್ನನ್ನು ಕೇಳಿ ಕೊಲ್ಲದಿರಿ ನಾನರಿಯೆ
ಅವರಿಂದ ನಿಮಗೇನು ಮತ್ತೆ ಬಹರು
ಮತ್ತೆ ಬರುವರು ನಾಳೆ, ಇದ್ದುಕೇಳಿರಿ ನೀವೆ
ಬಂದೆ ಬರುವುರು ಎಂದು ನಕ್ಕು ನುಡಿದು

(ಹೀಗಾಯಿತು ದೀಪದಮಲ್ಲಿ ಮಲ್ಲಿಗೆ ಮಾಲೆ)

ತನ್ನ ಪಾಡಿಗೆ ತಾನು ಮಲಗುತ್ತಾಳೆ. ಇತ್ತ ನಿದ್ದೆ ಬಾರದ ಗಂಡ ಬಂದವರು ಯಾರಿರಬಹುದೆಂದು ಚಿಂತಿಸುತ್ತ

ಇಂಥವರು ಒಂದೆ ಸಲ ಬಂದು ತೆರಳುವುದಿಲ್ಲ
ಒಂದು ಘಳಿಗೆ ಭೂಮಿ ಸ್ವರ್ಗವಹುದೆ
ಮತ್ತೆ ಬಹರೆಂದಿವಳು ಆಡಿದುದು ಸಟೆಯಲ್ಲ
ಮಳೆ ಬೆಳಸು ಬದುಕೆಲ್ಲ ಇವರಿಂದಲೆ

(ಹೀಗಾಯಿತು ದೀಪದಮಲ್ಲಿ ಮಲ್ಲಿಗೆ ಮಾಲೆ)

ಎಂದು ಸಮಾಧಾನ ಮಾಡಿಕೊಳ್ಳುತ್ತಾನೆ. ಯಾರೋ ಬಂದಿದ್ದರು ಎಂಬ ಸಾಧಾರಣ ಸಂಗತಿ ಈ ಕವಿತೆಯಲ್ಲಿ ಏರಿರುವ ಎತ್ತರ ಗಮನಾರ್ಹವಾದುದು.

ಕೆ.ಎಸ್.ನರವರ ಸಾಂಸಾರಿಕ ಜೀವನವನ್ನು ಕುರಿತು ಇಂತಹ ಕವಿತೆಗಳು ತೀರ ಸರಳ, ಸಾಧಾರಣ ಸಂಗತಿಗಳ ಮೂಲಕ ಅಸಾಧಾರಣವಾದ ಚಿಂತನೆಗಳು, ಸತ್ಯಗಳು ಬದುಕಿನ ಪಾರಂಪರಿಕ ಶ್ರದ್ಧೆಗಳು ಅನಾಯಾಸವಾಗಿ ಅಭಿವ್ಯಕ್ತಗೊಂಡಿವೆ.

ಬೇಂದ್ರೆಯವರ ಕಾವ್ಯ ಲೋಕದಲ್ಲಿ ಸಖೀಗೀತ ಒಂದು ಅನನ್ಯವಾದ ಖಂಡಕಾವ್ಯ. ಕನ್ನಡಕಾವ್ಯ ಪ್ರಪಂಚದಲ್ಲಿಯೇ ಒಂದು ನೂತನ ಕ್ರಮ. ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೇ ಎಂಬ ಪ್ರೀತಿ ಪುಟದ ಕೊನೆಯ ಸಾಲು. ಸಖೀಗೀತದ ಶಿಲ್ಪಕ್ಕೆ ಒಂದು ಸೌಂದರ್ಯವನ್ನು ತಂದು ಕೊಟ್ಟಿದೆ. ಸಖೀಗೀತ ಕವನವೂ ದಾಂಪತ್ಯದಲ್ಲಿ ಸಖ ಸಖಿಯ ನೆಲೆಗಳು ಹಲವಾರು ಅವಸ್ಥೆಯಲ್ಲಿ ಹಾದು ಬಂದುದನ್ನು ವಿವರಿಸುವ ದೀರ್ಘ ಕವನ ಇದುವರೆಗೆ ದಾಂಪತ್ಯ ಚೌಕಟ್ಟಿನಲ್ಲಿ ನೋಡಿದ ಬೇಂದ್ರೆಯವರ ಕವನಗಳಲ್ಲಿ ಬದುಕಿನ ವಿವಿಧ ಸ್ವರೂಪಗಳ ಅನುಭವ ವಿಕಾಸಗಳ ಪರಸ್ಪರ ಅರಿಯುವಿಕೆಯ ವಿಭಿನ್ನ ಸ್ವರೂಪಗಳ ಹಲವು ವಿಧಗಳ ಈ ದೀರ್ಘ ಕವನದಲ್ಲಿ ಸಖಸಖಿಯ ಅನುಭವಗಳಲ್ಲಿ ಬಂದು ಶಾಸ್ತ್ರೀಯತೆ ಕಂಡು ಬರುತ್ತದೆ. ಈ ಕವನದಲ್ಲಿ ನಾಯಕ ತನ್ನ ಜೀವನಾನುಭವಗಳನ್ನು ಬಿಚ್ಚಿಹೇಳ ಬಯಸುತ್ತಾನೆ. ಅಷ್ಟೆ ಅಲ್ಲ ತಮ್ಮ ಸಖ್ಯದ ಹೊಸ ಗುರಿಯ ಕಡೆಗೆ ಅವಳನ್ನು ಕರೆದೊಯ್ಯುವ ಆಶಯವನ್ನು ವ್ಯಕ್ತಪಡಿಸುತ್ತಾನೆ. ಬೇಂದ್ರೆಯವರು ಸಖೀಗೀತದ ಮುನ್ನುಡಿಯಲ್ಲಿ ನನ್ನ ಜೀವನ ಕಥೆಯ ಹಂದರದ ಮೇಲೆ ಸಾಮಾನ್ಯ ಸಂಸಾರದ ಸುಖದುಃಖಗಳನ್ನು ಹಬ್ಬ ಬಿಟ್ಟಿದ್ದೇನೆ ಎಂದು ಹೇಳುತ್ತಾರೆ. ಕವಿಯ ಸ್ವಾನುಭವದ ಹಿನ್ನಲೆಯು ಅದಕ್ಕಿದ್ದರೂ ಕವನದ ಅರ್ಥಗ್ರಹಿಕೆಗೆ ಅದು ಅವಶ್ಯಕವೇನೂ ಆಗಬೇಕಿಲ್ಲ. ಕವಿಯೇ ಅದನ್ನು ಸೂಚಿಸುತ್ತಾರೆ. ಅವರ ಸಖೀಗೀತದ ಮೊದಲ ಪ್ರಾರಂಭವೂ ಸ್ವಾನುಭವವೂ ಸಾಮಾನ್ಯೀಕರಣಕ್ಕೆ ಒಳಗಾಗುವ ನೆಲೆಯನ್ನು ಕುರಿತೇ ಹೇಳುತಿದೆ.

ಸಖೀ ನಮ್ಮ ಸಖ್ಯದ ಅಖ್ಯಾನ, ಕಟುಮಧುರ ವ್ಯಾಖ್ಯಾನದೊಡಗೂಡಿ ವಿವರಿಸಲೇ..
ಸಖಿ ನಮ್ಮ ಸಖ್ಯದ ಅಖ್ಯಾನ ಕಟು ಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ

(ಸಖೀಗೀತ ೧೯೩೭ ಪುಟ ೧)

ವ್ಯಾಖ್ಯಾನದೊಡಗೂಡಿ ವಿವರಣೆ ಕುಸುರಿ ಬಿಡಿಸಿದಂತಿದೆ. ಅನುಭವವು ಕಲೆಯಾಗುವ ಬಗೆಯೊಂದನ್ನು ಕುರಿತು ಹೇಳುತ್ತದೆ. ಇದೇ ಭಾವವೂ ಮುಂದುವರೆಯುತ್ತ ಪಟ್ಟ ಪಾಡೆಲ್ಲವೂ ಹುಟ್ಟ ಹಾಡಾಗುವುದು ಕೂಡ ಕಲಾತ್ಮಕ ನೆಲೆಯದ್ದಾಗಿದೆ.

ವಿವಾಹದ ಸಂದರ್ಭದಲ್ಲೇ ಹೆಣ್ಣಿನ ಸಂಪರ್ಕವು ಕವನದ ನಾಯಕನಿಗೆ ಸಾಧ್ಯವಾಗಿದೆ. ಆದ್ದರಿಂದಲೇ ಅಂತಃ ಪಟದಾಚೆ ವಿಧ ತಂದ ವಧು ನೀನು ಮೇಲೆ ಸಾವರಿಸಿಕೊಂಡು ನಿಂತಿದ್ದೀಯ ಎನ್ನುವ ಮಾತುಗಳಲ್ಲೇ ಇಬ್ಬರ ನಡುವಣ ಸಂಬಂಧವು ಹೊಸದೆನ್ನುವ ಅಭಿಪ್ರಾಯವಿದೆ. ಸಂಸಾರವನ್ನು ದಿಕ್ಕೆಡಿಸುವ ಘಾತ

ಪರಂಪರೆಗಳು ಒಂದಾದ ಮೇಲೊಂದರಂತೆ ಒದಗಿ ಬರುತ್ತದೆ. ದಾಂಪತ್ಯದಲ್ಲಿ ವಿರಸ ಪ್ರಾರಂಭಕ್ಕೆ ನಾಂದಿಯಾಗುತ್ತದೆ. ನೆಲೆ ತಪ್ಪಿದ ಹಕ್ಕಿ ಅಲೆವಂತೆ ಮುಗಿಲಲಿ ಹತ್ತು ದಿಕ್ಕೆ ನಾನು ಹಾರಾಡಿದೆ, ಒಲವಿಗೆ ಹುಡುಕಾಟ ಬಾಳಿ ಮಿಡುಕಾಡಿ ಷಡ್ರಸ, ನವರಸ ರುಚಿ ನೋಡಿದೆ. ಹೀಗೆ ಕವಿ ಮತ್ತು ಹೆಂಡತಿಯ ನಡುವಣ ವಿರಸದ ಹಲವು ಸೂಚನೆಗಳು ಕವನದಲ್ಲಿ ಬಂದು ಹೋಗುತ್ತವೆ.

ಬಗೆ ಬಾನ್ ತುದಿಯಿಂದ ನಡುನಡುವೆ ಮುಗಿಲೊಂದು
ಕಿಡಿಗೇಡಿಯೊಲು ಏಕೋ ಗುಡುಗುತಿರೆ
ನಗೆಯಾಟ ಹೊಗೆಯೇರಿ ನುಡಿಯಲ್ಲಿ ಕಿಡಿಹಾರಿ
ನಮ್ಮದೆ ತಾನಾಗಿ ನಡುಗುತಿರೆ

(ಸಖೀಗೀತ ಪುಟ ೯)

ಜನುಮಕು ಮರಣಕು ಒಳಸೂತ್ರ ಇರುವದ
ಕಂಡಾಗ ಇತಿಮಿತಿಯಾಯ್ತೆನಗೆ
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೇ

(ಸಖೀಗೀತ ಪುಟ ೧೦)

ವಿರಸದ ಹಂತದಲ್ಲೆಲ್ಲಾ ಸಾವಿನ ಸುಳಿವು ಇವನ ಅನುಭವಕ್ಕೆ ಬರುವುದನ್ನು ಗಮನಿಸಬಹುದು. ಇಂಥ ಹಂತಗಳಲ್ಲೆಲ್ಲಾ ಕವಿ ಮನಸ್ಸು ಸೃಷ್ಟಿಯ ಕಡೆಗೆ ತಿರುಗುತ್ತದೆ. ಋತುವಿನ ವಿವಿಧ ವಿನ್ಯಾಸಗಳಲ್ಲೂ ಬೆಸೆದು ಕೋಗಿಲೆಯ ಬಗೆಗಿನ ಭಾವವೊಂದು ಸಂಸಾರದ ವಿರಸದ ನೆಲೆಗೆ ಸಾರ್ಥಕ್ಯಗೊಂಡಿದೆ.

ಮಾಗಿಯ ಕಾಲಕ್ಕೆ ಹೇಗಿದ್ದೆ ಕೋಗಿಲ?
ಹೋಗಿದ್ದೆ ಹನವಾಗಿ ಪನವಿನೊಳೆ
ಸೊಗಕೊಂದು ರಾವುಂಟು ಋತು ಬದಲಾದರೇ
ನೆಮಗೆಮ್ಮ ಬಿತ್ತರದ ಭೂಮಿಯೊಳೇ

ಸಖೀಗೀತ

ಸೃಷ್ಟಿ ಮತ್ತು ಅದರ ಪರಕರಗಳು ಸಹಜ ಚೈತನ್ಯವನ್ನು ಮರುಕಳಿಸಿ ಪಡೆಯುತ್ತಿದ್ದಾಗಲೂ ಅಭಾವ ಸಂಸಾರ ಮರ್ತ್ಯದೆ. ಈ ನೆಲೆಯಲ್ಲಿ ರೂಪಗೊಳ್ಳುತ್ತಿಲ್ಲವಲ್ಲ ಎನ್ನುವ ಕೊರಗು ಕವನದ ಒಂದು ಮೂಲೆಯಲ್ಲಿದೆ. ಋತು ಬದಲಾದಂತೆ ಜೀವನದ ಬಗೆಯೂ ಸುಖದುಃಖಗಳ ಆವರ್ತನವಾಗುವುದು. ಬಯಸುವ ಒಂದೊಂದು ಬಗೆಯ ಚೈತನ್ಯದ ಆವಿಷ್ಕಾರ ಬಯಸುವ ಇಲ್ಲಿನ ಹೋಲಿಕೆ ಮನನೀಯ.

ಸಂಸಾರದ ವಿಷಮತೆಯನ್ನು ಕವನದುದ್ದಕ್ಕೂ ಚಿತ್ರಿಸುತ್ತಾ ಈ ಮರ್ತ್ಯದ ಕೋಟಲೆಗಳ ರೂಪದಲ್ಲಿಯೇ ಮುಳುಗುವುದರ ನಿರರ್ಥಕತೆಯನ್ನು ಕವನದ ನಾಯಕನು ವ್ಯಕ್ತಪಡಿಸುತ್ತಾನೆ. ಆದರೆ ಹವಣಿಕೆಯ ಪ್ರಯತ್ನವನ್ನು ಮಾತ್ರ ಬಿಟ್ಟಿಲ್ಲ.

ತಿರುಗಿ ಬಂದರುಕೆಳಗೆ ಮೇಲೆಂದರೆ
ಮುಂದಿಲ್ಲ ಹಿಂದಿಲ್ಲ ಹಾಗೆ ಇದೆ
ಈ ಬಾಳ ಬವಣೆಗೆ ಹವಣಿಲ್ಲ ಹತಿಯಿಲ್ಲ
ಕಂಗಳು ಏಕೋ ಕತ್ತಲಿಸುತಿವೆ
ಜೋಡಿ ಇಲ್ಲದ ಎತ್ತು ಎಳೆದಾಡುವ ಗಾಡಿ
ನಡೆದಂತೆ ತತ್ತರಿಸಿ ಬಗೆತನವು
ಹಗೆಯಾಗದಿರಲೆಂದು ಇಬ್ಬರೂ ಹವಣಿಸಿ
ಒಬ್ಬರನೊಬ್ಬರ ತೂಗಿದವು

(ಸಖೀಗೀತ ಪುಟ ೨೫)

ಸಖೀಗೀತ ಧೀರ್ಘ ಕವನದ ಬಹುಭಾಗದಲ್ಲಿ ಬದುಕಿನ ಕೋಟಲೆಗಳನ್ನು ವಿವರಿಸುತ್ತಾ ಆ ಬದುಕು ಸ್ಥಿರ ಸ್ವರೂಪದ್ದು ಎನ್ನುವ ಕವಿ ಅದರಿಂದ ಹೊರಬರುವ ಉಪಾಯವನ್ನು ಹಲವು ಮುಖಗಳಲ್ಲಿ ವಿವರಿಸಬಯಸುತ್ತಾನೆ. ಸೃಷ್ಟಿಯೊಡನೆ ಒಂದಾಗುವ ಮತ್ತು ಅದರ ಮೂಲಕ ಸೃಜನಶೀಲ ಕ್ರಿಯೆಯಲ್ಲಿ ತೊಡಗುವ ಬಗೆ ಇಂಥ ಉಪಾಯಗಳಲ್ಲಿ ಒಂದು ಭಾಗ ಕವನದಲ್ಲಿ ಹೀಗಿದೆ...

ಕುಣಿಯೋಣು ಬಾ ಎಂದು ಪ್ರಣಯದೋಲೆಯನೊಂದು
ಎದೆವಾತಿನಿಂದೆದೆಗೆ ನಾ ನಟ್ಟಿದ್ದೆ
ಪ್ರತಿಭೆಯ ಗರ್ಭದ ವಿಶ್ವಕರ್ಮನ ಕರೆಸಿ
ಗಾಳಿಗೋಪುರವೊಂದು ನಾ ಕಟ್ಟಿದ್ದೆ
ವಾಗೀಂದ್ರ ಜಾಲದ ಮಾಲೆ ಮಾಲೆಯ ಬೀಸಿ
ಸಪ್ತ ಸ್ವರ್ಗದ ಶಿಖರವನು ಮುಟ್ಟಿದ್ದೆ
ನನ್ನ ಪಾಲಿಗೆ ಮಾತ್ರ ಹೇ ಪ್ರೇಮ ದೇವತೆ
ಮೌನ ಮುದ್ರೆಯನಲ್ಲು ನೀ ತೊಟ್ಟಿದ್ದೆ

(ಸಖೀಗೀತ ಪುಟ ೨೧)

'ಹೆಣ್ಣು ಗಂಡಿಗೆ ಚೆಲುವು' 'ಗಂಡು ಹೆಣ್ಣಿಗೆ ಬಲವು' ಇದುವೆ ಹೆಣಿಗೆಯ ಬಲವು ಮೂಲೋಕಕು ಎಂಬ ನಂಬಿಕೆಯನ್ನು ಒಪ್ಪದ ಕವಿ ಸೌಂದರ್ಯವೆಂಬುದು ಕಣ್ಣಿನ ತುತ್ತಲ್ಲ, ಕಣ್ಣಿಗೂ ಕಣ್ಣಾಗಿ ಒಳಗಿಹುದು. ರೂಪ ಲಾವಣ್ಯಕ್ಕೆ ಅಳೆಯಲುಬಾರದು ಎಂಬ ನಂಬಿಕೆಯು ಗಾಢವಾಗುವ ಹಂತದಲ್ಲೇ ತನ್ನ ಪ್ರೇಮ ದೇವತೆಯನ್ನಾಗಿ ಕಾಣುವ, ತಮ್ಮ ನಡುವೆ ಎದೆ ಮಾತಿನಿಂದ ಹುಟ್ಟುವ ಮತ್ಸರದ ಕಲುಷಿತದ ಸ್ಪರ್ಶವೂ ಪ್ರಧಾನವಾಗದ ಹೊಸ ಬಗೆಯ ಒಲವನ್ನು ಪ್ರತಿಭೆಯ ಗರ್ಭದ ಮೂಲಕ ಹೊರಗೆಡಹುವ ಆಶಯವನ್ನು ಹೊಂದಿದ್ದಾನೆ. ವಾಗ್ ಇಂದ್ರಜಾಲಕ್ಕೆ ಪ್ರತಿಭಾಚಾಕ್ಷುವಿಗೆ ಕಲ್ಪನಾ ಲೋಕಕ್ಕೆ ಅನುಭಾವದ ನೆಲೆಗಳಿಗೆ ಹಾರಬೇಕೆನ್ನುವ ನಾಯಕನಿಗೆ ಆ ಲೋಕವನ್ನು ಕಂಡರಿಸಲು ಸಖೀಯ ಸಂಬಂಧಕ್ಕಿಂತ ಅದರ ದೈವಿಕ ಪರಿಶುದ್ಧ

ಸಾತ್ವಿಕ ಪಾಕವನ್ನೇ ಆಯ್ದು ಸಾಂಕೇತಿಕ ಕಾಲ್ಪನಿಕ ನೆಲೆಯಲ್ಲಿ ಕಾಣಿಸಿಕೊಳ್ಳುವ ಬಗೆಯಿದು. ಅದನ್ನು ಕೆಲವೊಮ್ಮೆ ಲೌಕಿಕದ ಪರಿಭಾಷೆಯಲ್ಲಿ ವಿವರಿಸಲು ಕವನದ ನಾಯಕನು ಪ್ರಯತ್ನಿಸುತ್ತಾನೆ.

ಎಂದಿನಿಂದಲೊ ಏನೋ ಒಳಗೊಂದು ಸಖಿ ಜೀವ
ಸಖಿ ಬ್ಯಾರೆ ಬಾ ಎಂದು ಕೂಗುತಿದೆ
ಮುಂದಿನ ಪಥದಲ್ಲಿ ಸಖಿಯಾಗು ಬಾ ಎಂದು
ನನ್ನ ಮನೋರಥ ಕೂಗುತಿದೆ

ಬಾನಿಂದ ಬಾನಿಗೆ ಹಾಡಿನ ತಾನೊಂದು
ಸಖಿ ಸಖಿ ಸಖಿಯೆಂದು ಕೂಗುತಿದೆ
ನಾನೂ ನೀನೂ ಸಖಿ ಸಖಿ ಸಮ ಸುಖಿ
ಎಂದೆನುತ ಮುಂದಕೆ ಹೋಗುತಿದೆ

ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಬಾಳಲ್ಲ ಬದುಕಲ್ಲ ಜೀವ ಜೀವಕೆ ಉ
ದ್ದೀಪನವಾದುದೆ ಜೀವನವು

ಅದು ಇದೆ ಎದೆಯಲ್ಲಿ ಬೆಳಕಿನ ಬದಿಯಲ್ಲಿ
ರಸಗಂಗಾ ನದೆಯಲ್ಲಿ ಅದರುಗಮ
ಹೆಸರದಕೆ ಪ್ರೀತಿಯು ಹಿಗ್ಗಿನ ರೀತಿಯು
ಆತ್ಮದ ನೀತಿಯು ಮಧು ಸಂಗಮ

ನಾದದ ಸೆಳೆಮಿಂಚು ಸಮತೆಯ ಗೆಳೆಸಂಚು
ಎಸಳಿನ ಎಳೆಯಂಚು ಎಳೆದೀತೇನೇ?
ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲರಾರು ಕಾಮಾಕ್ಷಿಯೇ

(ಸಖೀಗೀತ ೧೦೮೭ ಪುಟ ೩೮)

ಮುಂದಿನ ಪಥ, 'ಜೀವಕ್ಕೆ ಉದ್ದೀಪನ' ಮತ್ತು ಪ್ರೀತಿ ಆತ್ಮದ ನೀತಿ ಒಂದಕ್ಕೊಂದಕ್ಕೆ ಇರುವ ಸಂಬಂಧ ಇವು.

ಸಖೀಗೀತದ ಹೆಣ್ಣಿನ ಧ್ವನಿ ಮತ್ತು ಬದುಕಿನ ಬಗೆಗಿನ ಇವಳ ನಂಬಿಕೆಗಳು ಗಂಡನ ಬಯಕೆ ಹಾರೈಕೆಗಳಿಗಿಂತ ಭಿನ್ನವೇ ಆಗಿವೆ ಇವನು ಕುಣಿಯೋಣು ಬಾ ಎಂದು ಎದೆಯ ಕಲೆಯನ್ನೇ ಕೊಟ್ಟು ಪ್ರತಿಭೆಯ ಗರ್ಭದ ವಿಶ್ವಕರ್ಮವನ್ನು ಕರೆಸಿ ಪ್ರೇಮದೇವತೆಯೆಂದು ಇವಳನ್ನು ಭಾವಿಸಿದರೂ ಅವಳು ಮೌನ ಮುದ್ರೆಯನ್ನೇ ತೋರುತ್ತಾಳೆ. ಕೆಲವು ಸಂದರ್ಭಗಳಲ್ಲಿ ತನ್ನ ನಿಲುವನ್ನು ಸ್ಪಷ್ಟಪಡಿಸಿದ್ದಾಳೆ.

ನಿಮ್ಮ ಜೀವನ ಧ್ಯೇಯ ಗೌರಿಶಂಕರದಂತೆ
ಶಿಖರವನೆತ್ತಿದೆ ಮುಗಿಲಿನೆಡೆ
ನನ್ನೆದೆ ತಿರುಗಿದೆ ಗಂಗೆಯ ಹರಿದಂತೆ
ಜನ ರೀತಿಯಂತೆಯೆ ನೆಲದ ಕಡೆ

ನಿಮ್ಮೆದೆ ಕರಗಿದರೆ ನನಗೆ ನೀರೆರೆವುದು
ಚಳಿಗಾಲ ಬಂದಂತೆ ಕಲ್ಲಾಗಲು
ನಾ ತಣ್ಣಗಾಗುತ ನಡುಗುತ ಅಡಗಲು
ಓಡುವೆ ದಿಗ್ದೇಶಕೆಲ್ಲಾದರೂ

(ಸಖೀಗೀತ ೧೯೮೭ ಪುಟ ೩೪)

ಕವಿಗೆ ಭಿನ್ನವಾಗಿ ಕಾಣುವ, ಆದರೆ ಅವನನ್ನೇ ಅವಲಂಬಿಸಿರುವ ಹೆಣ್ಣಿನ ಸ್ವರೂಪವೆ ಇಲ್ಲಿ ಪ್ರತಿಮೆ ಸಂಕೇತ.

ಸಖೀಗೀತ ಕವನದಲ್ಲಿ ಹೆಂಡತಿ ಗಂಡನು ಆಶಿಸಿದ ರೀತಿಯ ಸಖಿಯಲ್ಲಿ ಸಖೀ ನಮ್ಮ ಸಖ್ಯದ ಅಖ್ಯಾನ ಎಂದು ಕವಿ ಹೇಳುತ್ತಿದ್ದರೂ ಒಟ್ಟು ಕವನದ ಸ್ವರೂಪವು ಅವನ ಮಾತನ್ನು ನಿರಾಕರಿಸುವಂತಿದೆ.

ಸಖೀಗೀತ ದಾಂಪತ್ಯ ಅನುಭವದ ಕೆಲ ಸಂಗತಿಗಳನ್ನು ಹೇಳುವಂತೆ ತೋರಿದರೂ ಕಥೆಯ ಮುಖ್ಯಾಂಶವು ಸಾಂಕೇತಿಕ ಅರ್ಥ ವಲಯವನ್ನು ಹೊಂದಿರುವ ಹಾಗೆ ಕಾಣುತ್ತದೆ. ಸಖೀಗೀತದಲ್ಲಿ ಯಾರಿಂದಲೋ ಚಲಿಸುವ ಪ್ರಾಣದ ಸೂತ್ರವು ಪುರುಷ ಪ್ರಕೃತಿಗಳನ್ನು ಕುಣಿಸುತ್ತದೆ ಎನ್ನುವ ಭಾವ ಮೂಡಿ ಬರುವುದುಂಟು. ಹೆಣ್ಣು ಮತ್ತು ಪ್ರಕೃತಿ ತತ್ವದ ಈ ಹೊಂದಿಸುವಿಕೆಯ ನೆಲೆಯಲ್ಲಿಯೂ ಇಲ್ಲಿ ವೈಯುಕ್ತಿಕ ಪಾತಳಿಯಿಂದ ಸಾಮಾನ್ಯೀಕರಣದ ಪಾತಳಿಗೆ ಕವನದ ಆಶಯಗಳು ಸರಿಯುತ್ತವೆ.

ಬೇಂದ್ರೆಯವರ ಕೌಟುಂಬಿಕ ಗೀತೆಗಳಲ್ಲಿ ಇನ್ನೂ ಹಲವಾರು ರಚನೆಗಳು ಸಖ ಸಖಿ ಇವರಿಬ್ಬರೂ ಮುಟ್ಟಬೇಕಾದ ನೆಲೆಗಳನ್ನು ವಿವರಿಸುವಂಥವುಗಳೇ ಆಗಿವೆ. 'ಸಖಿ ನಮ್ಮ ಸಖ್ಯದ ಅಖ್ಯಾನ ಪಜಾರಗಟ್ಟಿ ಮುಟ್ಟೋಣ' ಬಾ ಮುಂತಾದ ಕವನಗಳನ್ನು ಉದಾಹರಣೆಯಾಗಿ ಕೊಡಬಹುದು.

'ಬೇಂದ್ರೆಯವರ ಹುಬ್ಬಳ್ಳಿಯಾಂವ' ಕವಿತೆ ವಿವಾಹೇತರ ಸಂಬಂಧವನ್ನು ಕುರಿತದ್ದಾಗಿದೆ. ಪ್ರಣಯಭಂಗದಿಂದ ವಂಚಿತಳಾದ ಹೆಣ್ಣೊಬ್ಬಳ ಪ್ರೇಮೋನ್ಮಾದದ ಹಾಡಾಗಿದೆ. ಅಂದರೆ ತನ್ನ ನಾಯಕನಿಗಾಗಿ ಇಲ್ಲಿ ಉನ್ಮತ್ತ ಪ್ರಣಯಿನಿಯ ಕಾತರದ ಕರೆಯಿದೆ. ಇಲ್ಲಿನ ವೇಶ್ಯಯನ್ನು ಚಿತ್ರಿಸುವಲ್ಲಿ ಕವಿ ಅವಳ ವ್ಯಾಪಾರಿ ಪ್ರವೃತ್ತಿಯನ್ನಷ್ಟು ನೋಡಿಲ್ಲ. ಅದರಾಚೆ ಮಾನವೀಯ ದೃಷ್ಟಿ ಹಾರಿಸಿ ಪ್ರಕೃತಿ ಸಹಜ ಮೆರಗಿನಿಂದ ಜೀವಂತಿಕೆಯ ಅಗತ್ಯತೆಯನ್ನು ಒತ್ತಿ ಹೇಳುತ್ತಾಳೆ.

ತಾಯಿ ಮತ್ತು ಮಗುವಿನ ಸಂಬಂಧ ಪ್ರತೀಕವಾದ ವಾತ್ಸಲ್ಯ ಭಾವವುಳ್ಳ ಕವಿತೆಗಳ ವಿವೇಚನೆಯೂ ಇಲ್ಲಿ ಪ್ರಮುಖವಾಗುತ್ತದೆ. ಈ ಸಂಬಂಧ ದಾಪತ್ಯದ ಒಂದು ಭಾಗವೇ ಎಂಬುದು ಗಮನಿಸಬೇಕಾದ ಅಂಶ.

ಕವಿಯ ಪ್ರೇಮದ ಸಾರಸರ್ವಸ್ವ ಅವನ ಮನದನ್ನೆಯನ್ನಾದರೂ, ಮಕ್ಕಳು ಮೊದಲಾದ ಜೀವಿಗಳೂ ಅವನ ಪ್ರೇಮಕ್ಕೆ ಭಾಗಿಗಳು. ಅವರಿಲ್ಲದೆ ದಾಂಪತ್ಯದ ಸವಿಯನ್ನು ಸವಿಯುವುದಕ್ಕೆ ಸಾಧ್ಯವಿಲ್ಲ. ಸಂತಸದ ಚಿಲುಮೆ ಚಿಮ್ಮುವುದಿಲ್ಲ. ಈ ಬಗೆಯ ಕವನಗಳು ದ. ರಾ. ಬೇಂದ್ರೆ ಮತ್ತು ಕೆ.ಎಸ್.ನ. ಅವರಲ್ಲಿಯೂ ಕಂಡು ಬರುತ್ತದೆ.

ಕೆ.ಎಸ್. ನರಸಿಂಹಸ್ವಾಮಿಯವರ ಸಣ್ಣ ಸಂಗತಿ, ತುಂಗಭದ್ರೆಯಂತಹ ಕವನಗಳು ವಾತ್ಸಲ್ಯ ಗೀತೆಗಳಾಗಿ ಮೂಡಿಬಂದಿವೆ. ಸಣ್ಣ ಸಂಗತಿ ಒಂದು ಧ್ವನಿ ಪೂರ್ಣವಾದ ವಾತ್ಸಲ್ಯಗೀತೆಯಾಗಿದೆ.

ಇದು ಸರಿಯೆ ತಪ್ಪೆ ಉತ್ತರವಿಲ್ಲ ದೆಸೆದೆಸೆಗೆ
ಎಲ್ಲ ಮಲಗಿಹರು ಮಾತಾಡದೆಯೆ ನೋಡದೆಯೆ
ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿಯುತಿದೆ
ಅದನು ಲೆಕ್ಕಿಸದೆ ಮಗು ಹೊದಿಕೆಯನು ಒದೆಯುತಿದೆ.

(ಇರುವಂತಿಗೆ ಸಣ್ಣಸಂಗತಿ ಮೈ.ಮ. ೨೪)

ಇದು ನಿಜವಾಗಿಯೂ ಒಂದು ಸಣ್ಣಸಂಗತಿ ಆದರೆ ಅದನ್ನು ಕುರಿತು ಗುರುತಿಸಿದ ಕವಿಗೆ ಅದು ಜಗತ್ತಿನ ಸಂಗತಿಯಾಗಿ ಪರಿಣಮಿಸಿದೆ.

ಕೆ.ಎಸ್.ನ.ರವರ ಮತ್ತೊಂದು ಕವನ ತುಂಗಭದ್ರೆ. ಇವಳು ಹೊಳೆಯಲ್ಲ ವರ್ಷದ ಮಗಳು ಎಂಬ ಆತ್ಮೀಯವಾದ ಮಧುರವಾದ ಹಾಸ್ಯವನ್ನೊಳಗೊಂಡ ವಾತ್ಸಲ್ಯಭಾವ ಅಪರಂಜಿಯಂತೆ ಹೊಳೆಯುತ್ತದೆ. ಈ ದಿಸೆಯಲ್ಲಿ ಇವರ ಮತ್ತೊಂದು ರಾಮಬಂಟ ಎಂಬ ಕವನವು ಗಮನಾರ್ಹವಾದುದು.

ಬೇಂದ್ರೆಯವರಲ್ಲಿ ನೀ ಹಿಂಗ ನೋಡ ಬ್ಯಾಡ ನನ್ನ, ಸಂಜೀಯ ಜಾವಿಗೆ, ಯಾರಿಗೂ ಹೇಳೋಣ ಬ್ಯಾಡ, ಕೂಸು ಬಿನ್ನಾಣ, ನನ್ನಕಂದ, ಮಂಗಳಾ.. ಮುಂತಾದ ಕವನಗಳಲ್ಲಿ ತಮ್ಮ ಜೀವನಾನುಭವದಲ್ಲಿ ಮಕ್ಕಳ ಸಾವು ನೋವಿನಿಂದ ಕೂಡಿದ ಸಂದರ್ಭದ ನೋವಿನ ಅನುಭವಗಳೇ ಪ್ರಧಾನ. ಈ ವಿಚಾರದಲ್ಲಿ ಬೇಂದ್ರೆಯವರ ಕರುಳಿನ ವಚನಗಳು ವಿಶೇಷವಾದ ರಚನೆಗಾಗಿ ಪರಿವರ್ತನೆಗೊಂಡಿರುವುದು.

# ಗ್ರಾಮೀಣ ಮತ್ತು ನಾಗರೀಕ ಜೀವನ ವಿನ್ಯಾಸ/ಪರಿಸರ

ಒಂದು ಉತ್ತಮ ಸಾಹಿತ್ಯ ಕೃತಿ ಆಯ್ದು ವಸ್ತು ಬಳಕೆಯ ಭಾಷೆ ಹಾಗೂ ಅಭಿವ್ಯಕ್ತಿಯನ್ನೊಳಗೊಂಡಿರುವಂತೆಯೇ, ಆಯಾಯ ಪರಿಸರ ಕಾಲಘಟ್ಟ ಜನಜೀವನವೂ ಸೇರಿದೆ. ಯಾವುದೇ ಒಂದು ಸಾಹಿತ್ಯ ಕೃತಿಯನ್ನು ಅಧ್ಯಯನ ಮಾಡುವಾಗ ಪರಿಸರ ಜನ ಜೀವನದಂತಹ ಅಂಶಗಳು ಮುಖ್ಯ. ಈ ಹಿನ್ನಲೆಯಲ್ಲಿ ನವೋದಯ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಪ್ರಮುಖ ಕವಿಗಳಾದ ದ.ರಾ.ಬೇಂದ್ರೆ ಮತ್ತು ಕೆ.ಎಸ್.ನ. ಅವರುಗಳ ದಾಂಪತ್ಯ ಗೀತೆಗಳನ್ನು ಕುರಿತು ಅಧ್ಯಯನ ಮಾಡುವಾಗ ಈ ಮೇಲಿನ ಅಂಶಗಳ ವಿಚಾರವು ಯೋಗ್ಯ.

"ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೆ ನೀಡುವೆನು ರಸಿಕ ನಿನಗೆ ಕಲ್ಲುಸಕ್ಕರೆಯಂಥ ನಿನ್ನೆದೆಯು ಕರಗಿದರೆ ಈ ಸವಿಯ ಹಣಿಸು ಎನಗೆ" ಎಂಬ ಬೇಂದ್ರೆಯವರ ಮಾತು ಅವರ ಜೀವನವೇ ಕಾವ್ಯ, ಕಾವ್ಯವೇ ಜೀವನ ಎಂಬ ಎರಡು ಅಂಶಗಳನ್ನು ಸಂಕೇತಿಸುತ್ತದೆ. ಹೀಗೆ ತಮ್ಮ ಜೀವನಾನುಭವಗಳನ್ನೇ ವಸ್ತುವನ್ನಾಗಿಸಿಕೊಂಡು ಪಾಡನ್ನ ಹಾಡಾಗಿ ರಚಿಸಿದ ಕವಿತೆಗಳೆ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿವೆ. 'ಸಖೀಗೀತ' 'ನನ್ನ ಕೈ ಹಿಡಿದಾಕೆ' 'ಮನದನ್ನೆ' 'ನೀ ಹೀಂಗ ನೋಡಬ್ಯಾಡ ನನ್ನ' 'ನಾನೊಂದು ನೆನೆದರೆ' ........ ಮುಂತಾದ ಹಲವು ಕವಿತೆಗಳು ಕೌಟುಂಬಿಕ ಗೀತೆಗಳಾಗಿ ಮೂಡಿ ಸಾಮಾಜಿಕ ಮತ್ತು ಸಾಂಸ್ಕೃತಿಯ ಮೌಲ್ಯಗಳನ್ನು ಪ್ರತಿಬಿಂಬಿಸುತ್ತವೆ.

ಹೀಗೆ ದ.ರಾ.ಬೇಂದ್ರೆಯವರು ಕೌಟುಂಬಿಕ ಚೌಕಟ್ಟಿನಲ್ಲಿ ರಚಿಸಿರುವ ಕವಿತೆಗಳು ಗ್ರಾಮೀಣ ಪರಿಸರದ ಹಿನ್ನಲೆಯಲ್ಲಿಯೇ ಮೂಡಿಬಂದಿದೆ. ದಾಂಪತ್ಯ ಜೀವನದಲ್ಲಿ ಗಂಡು ಹೆಣ್ಣಿನ ಪರಸ್ಪರ ಅಗತ್ಯತೆ ಹಾಗೂ ಅವರ ನೋವು ನಲಿವುಗಳನ್ನು ಸಹಜ ರೀತಿಯಲ್ಲಿ ಬದುಕಿನ ಹಿತಾಸಕ್ತಿಯ ಕಡೆಗೆ ಒಳಗು ಮಾಡುವ ಆಶಯಗಳನ್ನು ಸಾಮಾನ್ಯ ಜೀವನದ ಹಿನ್ನಲೆಯಲ್ಲಿ ಚಿತ್ರಿಸಿದ್ದಾರೆ. ಗಂಡು ಹೆಣ್ಣಿನ ಸರಸ ವಿರಸ ಸನ್ನಿವೇಶಗಳು ಮಾತ್ರವಲ್ಲದೆ ಜೀವನ ಸಾಮರಸ್ಯಕ್ಕೆ ಪೂರಕ ಚಿಂತನೆಯುಳ್ಳ ಕವಿತೆಗಳು ಬೇಂದ್ರೆಯವರ ರಚನೆಯಲ್ಲಿ ಕಾಣಿಸಿಕೊಳ್ಳುತ್ತವೆ. ಅವರ ಜೀವನಾದರ್ಶಒಲುಮೆನಮ್ಮಬದುಕು ಎಂಬುದು ಅವರ ಜೀವನ ದೃಷ್ಠಿಯೂ ಹೌದು.

ಜಾನಪದ ಲಯವನ್ನು ತಮ್ಮ ಸಮರ್ಥ ಅಭಿವ್ಯಕ್ತಿಗೆ ಬಳಸಿಕೊಂಡ ಬೇಂದ್ರೆಯವರು ಅಂತೆಯೇ ಗ್ರಾಮೀಣ ಜನ ಜೀವನದ ಸುಖದುಃಖಗಳಿಂದ ಕೂಡಿದ ಬದುಕನ್ನು ಚಿತ್ರಿಸುವದರ ಮೂಲಕ ಜೀವನ ಸಾಮರಸ್ಯಕ್ಕೆ ಕರೆಕೊಟ್ಟಿದ್ದಾರೆ. ಇಂತಹ ಸಾಮರಸ್ಯವನ್ನು ಸಾರುವ ಅನೇಕ ಕವನಗಳನ್ನು ಬೇಂದ್ರೆಯವರಲ್ಲಿ ಕಾಣಬಹುದಾಗಿದೆ. 'ಗರಿ' ಸಂಕಲನದ 'ನನ್ನ ಹಾಡು' ಕವನದಲ್ಲಿ "ರಸವೇ ಜನನ ವಿರಸ ಮರಣ ಸಮರಸವೇ ಜೀವನ" ಎಂಬ ಸಾಲುಗಳಿಂದ ಸಾಮರಸ್ಯದ ಅಗತ್ಯತೆಯನ್ನು ಒತ್ತಿ ಹೇಳಿದ್ದಾರೆ.

ಇದೇ ರೀತಿಯ ಆಶಯವುಳ್ಳ ಕವಿತೆ 'ಮನದನ್ನೆ' ಕವನ ಶೀರ್ಷಿಕೆಯೇ ತುಂಬಾ ಗಮನಾರ್ಹವಾದುದು. ಹೆಂಡತಿ, ಮಡದಿ ಎನ್ನದೆ ಮನದನ್ನೆ ಎಂದು ಬಳಸಿರುವುದು ವಸ್ತುವಿನೊಂದಿಗೆ ವೈದೃಶ್ಯವನ್ನು ಸಾಧಿಸಿರುವ

ಅರ್ಥಪೂರ್ಣತೆಗೆ ಸಾಕ್ಷಿಯಾಗಿದೆ. ಇಡೀ ಪದ್ಯದಲ್ಲಿ ವಿರಸದ ಛಾಯೆ ಕವಿದಿರುವುದನ್ನು ಪದ್ಯದ ಹೆಸರಿನ ವಿರೋಧಾಭಾಸದಿಂದ ಕೂಡಿದ ವ್ಯಂಗ್ಯಾರ್ಥ ತನಗೆ ತಾನೇ ವ್ಯಕ್ತವಾಗುತ್ತದೆ.

ಆಡದಿರು ಮನದನ್ನೆ
ಎನಗೆ ಇದಿರಾಡದಿರು
ವಾದಕ್ಕೆ ಬೇಸತ್ತು
ಮರ್ಮಘಾತಕ್ಕೆ ಸತ್ತು
ಉಳಿದು ಬಂದೆ
ಎಲ್ಲಿಹುದು ತಿಳಿವಳಿಕೆ
ಜೀವನದ ಸಲವಳಿಕೆ
ಎಂದು ತಳಮಳಿಸಿ ನೀರಡಿಸಿ ಬಂದೆ
ಹೇಳುತಿರೆ 'ಹೂಂ' ಅನ್ನು
ಒರೆದು ನೋಡೀ ಹೊನ್ನು
ಹೊಳೆದಗೆರೆ ಬಣ್ಣಗಳ ತಿಳಿದು ನೋಡು
ಎದೆಯ ಆಳದ ಮಾತನಳೆದು ನೋಡು[೧]

ಈ ಕವನದಲ್ಲಿ ಸತ್ತು ಉಳಿದು ಬಂದೆ, 'ನೀರಡಿಸಿ ಬಂದೆ' 'ಎದೆಯ ಆಳದ ಮಾತು'.. ಇವು ಜೀವನದ ಪ್ರೀತಿಯ ಉತ್ಕಟತೆಯನ್ನು ಸಾರುತ್ತವೆ. ಮುಂದೆ ನಿನ್ನ ತಿಳಿವನು, ಹನಿಸು ಎಂಬ ಶರಣಾಗತ ಭಾವವೂ ಮಡದಿಯ ತಿಳುವಿನ ಜೊತೆಗೆ ನಂಬಿಕೆಯು ವ್ಯಕ್ತವಾಗುತ್ತದೆ. ಯಾವುದೋ ಕಾರಣದಿಂದ ಉಂಟಾದ ಗಂಡ ಹೆಂಡತಿಯರ ವಿರಸ, ಅದು ಸೃಷ್ಟಿಸಿದ ಪರಿಸ್ಥಿತಿಯನ್ನು ಚಿತ್ರಿಸುತ್ತಲೇ, ಅದರಿಂದ ಪಾರಾಗುವುದಕ್ಕೆ 'ಸಾಕು ವಾದ ವಿವಾದ, ಜೀವ ಸಂವಾದಕ್ಕೆ ಹಸಿದು ಬಂದೆ. ಜೀವ ಜೀವಾಳದಲ್ಲಿ ಹೃದಯಾಂತರಾಳದಲ್ಲಿ ಇಳಿದು ನೋಡು' ಎಂಬ ಅಂಶದಿಂದ ಕವನದ ನಿರೂಪಕ ಪ್ರಯುತ್ನಿಸಿರುವುದು ಕವನದಲ್ಲಿ ವೇದ್ಯ.

ನನ್ನದಿದು ನಿನ್ನದಿದು
ಎಂದು ಎರಡು ಬಗೆಯ
ಪಾಲುಗಾರಿಕೆಯಲ್ಲಿ ಹೆಣಗಬೇಡ
ನಿನಗೆ ನೀರಿಲ್ಲೆಂದು ಒಣಗಬೇಡ[೨]

(ಮನದನ್ನೆ)

ಗಂಡ ಹೆಂಡರಿಬ್ಬರ ಗುಣಧರ್ಮ ಪರಸ್ಪರ ವಿರುದ್ಧಾತ್ಮಕ ನೆಲೆಯದ್ದಾಗಿದ್ದರೂ ವಿರುದ್ಧವಾಗಿದ್ದರೂ ದಾಂಪತ್ಯ ಎರಡು ಪ್ರತ್ಯೇಕ ಘಟಕಗಳಲ್ಲಿ ಒಂದೇ ಬಳ್ಳಿಯ ಹೂಗಳಂತೆ ಸಮರಸ ಸ್ವರೂಪಿ ನಿನಗೆ ನೀರಿಲ್ಲೆಂದು



೧ ಅಂಬಿಕಾತನಯದತ್ತರ ಸಮಗ್ರಕಾವ್ಯ ಸಂಪುಟ ೩. ಮನದನ್ನೆ ಪುಟ ೭೨
೨ ಅಂಬಿಕಾತನಯದತ್ತರ ಸಮಗ್ರಕಾವ್ಯ ಸಂಪುಟ ೩. ಮನದನ್ನೆ ಪುಟ ೭೩

ಒಣಗಬೇಡ ಎಂಬುದು ಪ್ರತ್ಯೇಕತೆಯ ಭಾವ. ಈ ರೀತಿಯ ಪ್ರತ್ಯೇಕತೆ ಭಾವನೆ ಗಂಡ ಹೆಂಡತಿಯಲ್ಲಿ ಒಂದಾಗಿ ಜೀವನ ನಿರ್ವಹಣೆಯ ಹಾದಿ ದುರ್ಗಮ. ಕವನದ ಕೊನೆಯಲ್ಲಿ ಜೀವನದ ಸಮರಸದ ತಿಳುವಳಿಕೆಯ ವಿವರವನ್ನು ಕೊಡಲು ಯತ್ನಿಸುತ್ತಾನೆ.

'ಇದಿರಾಡದಿರು ಮತ್ತೆ
ಎದಿರಾಡದಿರು ಇತ್ತ
ಮಾಡದಿರು ಬಾಳನ್ನು ಬೇಳೆಯಂತೆ
ಕೂಡಿರಲಿ ಬಾಳು ಇಡಿಗಾಳಿಯಂತೆ'
ನಾನೆಂದರೂ ಒಂದೆ
ನಾನೆಂದರೂ ನೀನೆಂದರೂ ಒಂದೆ
ಹೊಂದುಗೂಡಿ ಇರದ ಜನಕೆ ನೊಂದೆ
ನೀನು ನನ್ನವಳೆಂದು ಬಳಿಗೆ ಬಂದೆ'[1]

ಈ ಮೇಲಿನ ಮೊದಲೆರಡು ಸಾಲುಗಳು ಪ್ರತ್ಯೇಕತೆಯ ದ್ವೈತ ನೆಲೆಯಲ್ಲಿದ್ದರೂ ಅದ್ವೈತವಾಗುವುದು ನಂತರದ ಎರಡು ಸಾಲುಗಳು. ಜೀವನದ ಸಾಮರಸ್ಯ ಸಾದೃಶ್ಯದಿಂದ ಆತ್ಮೀಯವಾಗುತ್ತ ಇಡಿಗಾಳು ದಾಂಪತ್ಯ ಸಂಪೂರ್ಣತೆಯಿಂದ ಇರಬೇಕಾದ ಅಗತ್ಯತೆಯನ್ನು ಪ್ರತಿಬಿಂಬಿಸುತ್ತದೆ.

ಹೀಗೆ ಮನದನ್ನೆಯ ಮೇಲಿನ ಕೋಪದ ಪರಿಣಾಮಕಾರಿ ಚಿತ್ರಣ, ನಿರಾಶೆಯ ಜೊತೆಗೆ ಅಧೀರತೆಯನ್ನು ವ್ಯಕ್ತಗೊಳಿಸುವಂತೆ ತೋರಿದರೂ ಕೊನೆಯಲ್ಲಿ ಬರುವ ಕವಿತೆಯ ಆಶಯ ಮೌಲಿಕವಾಗಿದೆ.

'ಹೊಸಹುಟ್ಟು ಬರುವುದಿದೆ ಇನ್ನು ಮುಂದೆ
ಆಗೋಣ ಆ ಜಗದ ತಾಯಿತಂದೆ'[2]

ನಿರೂಪಕನ ಆರ್ತತೆಯ ಮೂಲಕವೇ ಹೊಸ ಆಶಯದತ್ತ ತುಡಿಯುವುದು ಈ ಕವನದ ವೈಶಿಷ್ಟ್ಯ. ಮೇಲಿನ ಸಾಲುಗಳಲ್ಲಿ ಮೈಮನಸ್ಸು ಸಂಘರ್ಷಗಳು ದಂಪತಿಗಳ ಬದುಕಿನಿಂದ ದೂರವಾಗಿ ಮುಂದಿನ ಜೀವನ ಸುಗಮವಾಗಿ ಸಾಗಬೇಕೆಂಬ ಲೋಕ ನೀತಿ ಸ್ವೀಕಾರದ ಜೊತೆಗೆ ಮತ್ತೊಂದು ಹೊಸ ಇಂಗಿತವೂ ಅಡಗಿದೆ. ಹೊಸಹುಟ್ಟು ದಾಂಪತ್ಯದ ಸಾಫಲ್ಯಕ್ಕೆ ಒಂದು ಮೈಲಿಗಲ್ಲು. ಹೀಗೆ ಹೊಸಹುಟ್ಟಿನಲ್ಲಿ ಆಸಕ್ತಿಯಿದೆ, ಒಲುಮೆಯಿದೆ, ವಾತ್ಸಲ್ಯವಿದೆ. ಜೊತೆಗೆ ಸಾಫಲ್ಯತೆಯ ಕುರುಹುಗಳಿವೆ. ಈ ಕವನ ದಾಂಪತ್ಯ ಜೀವನ ಗಂಡ ಹೆಂಡತಿಯರ ನಡುವೆ ಆಗಾಗ ಬಂದು ಹೋಗುವ ವೈಮನಸ್ಸುಗಳ ಭಾವ ಸಂಶುದ್ಧಿಯಾಗದೆ ಹೃದಯ ಸಂವಾದಕ್ಕೆ ಪುಷ್ಟಿ ದೊರಕದೆ ಪ್ರೇಮ ಜಗತ್ತು ಪ್ರಕಟವಾಗದೆಂಬ ತಾತ್ವಿಕ ನಿಲುವು ಕವಿಯ ಕಲಾತ್ಮಕ ಅಭಿವ್ಯಕ್ತಿಗೆ ಮಾದರಿ.

ದ.ರಾ.ಬೇಂದ್ರೆಯವರ ಕಾವ್ಯದ ಜೀವನಾನುಭವ, ಆಳವಾದ ಯಾತನಾಮಯ ಬದುಕಿನ ಅನುಭವಗಳ ಸಹಜ ಅಭಿವ್ಯಕ್ತಿ. ಇಂತಹ ಕವನಗಳಲ್ಲಿ ಒಂದು ಹುದುಗಲಾರದ ದುಃಖ ಕವನ. ಗಂಡ



೧ ಅಂಬಿಕಾತನಯದತ್ತರ ಸಮಗ್ರಕಾವ್ಯ ಸಂಪುಟ ೩. ಮನದನ್ನೆ ಪುಟ ೭೫
೨ ಅಂಬಿಕಾತನಯದತ್ತರ ಸಮಗ್ರಕಾವ್ಯ ಸಂಪುಟ ೩. ಮನದನ್ನೆ ಪುಟ ೭೫

ಹೆಂಡಿರ ನಡುವೆ ಸುಖದಾಯಕ ಕ್ಷಣಗಳೇ ನಿರಂತರವಾಗಿ ಕಂಡು ಬರುವುದಿಲ್ಲ. ಸುಖವನ್ನು ಸ್ವೀಕರಿಸುವ ನಾವು ದುಃಖವನ್ನು ಅಷ್ಟೇ ಸಮವಾಗಿ ಸ್ವೀಕರಿಸಬೇಕಾಗುತ್ತದೆ.ಮನದಾಳದ ನೋವನ್ನು ಹೆಂಡತಿ ಗಂಡನೆದುರು ತೋರ್ಪಡಿಸಿಕೊಳ್ಳಲು ಇಚ್ಚಿಸದೆ ತನ್ನ ಮೇಲ್ನೋಟದ ನಗುಮುಖದಲ್ಲಿ ಮರೆಸಲು ಯತ್ನಿಸಿರುವುದನ್ನು ಕಂಡ ಗಂಡನ ಮಾತುಗಳಿಂದ ಪ್ರಾರಂಭವಾಗುವ ಈ ಕವನ ಹೀಗಿದೆ.

ಹುದುಗಲಾರದ ದುಃಖ ಹುದುಗಿರಿಸಿ ನಗೆಯಲ್ಲಿ
ನಸುನಗುತ ಬಂದೆ ಇದಿರು
ಇನಿತು ತಿಳಿಯದ ಮೂಢನೆಂದು ಬಗೆದೆಯ ನನ್ನ
ಇದು ಯಾವ ಊರು ಚದುರು

ಹೀಗೆ ಕವಿ ಅಂತರ್ಯದ ಸತ್ಯವನ್ನು ಪ್ರಶ್ನಿಸುತ್ತಾನೆ. ಮುಂದೆ ಕವಿ ಕೊಡುವ ಪ್ರತಿಮೆ ಸನ್ನಿವೇಶಕ್ಕೆ ಸಮರ್ಪಕವಾದದಾಗಿದೆ.

ಮುಗುಳನಗೆಯ ನರಳಿಸುತ ಕರಿಯಲಿ ಹೊರಳಿಸುತ
ಸುಳ್ಳು ಸುಖ ಮರೆಸಬಹುದೆ
ಮಮತಾಜಳನು ಹುಗಿದು ತಾಜಮಹಲನ್ನು ಕಟ್ಟಿ
ನಿಜ ದುಃಖ ಮರೆಸಬಹುದೆ?

ಶಹಜಹಾನನು ತನ್ನ ಹೆಂಡತಿಯ ಅಗಲಿಕೆಯ ದುಃಖವನ್ನು ಮರೆಯಲು ತಾಜಮಹಲನ್ನು ಕಟ್ಟಿಸಿದ. ಆದರೆ ಹೆಂಡತಿಯನ್ನು ಅದರಲ್ಲಿ ಹುಗಿದು ತನ್ನ ದುಃಖವನು ಮರೆಯಲು ಸಾಧ್ಯವಾಯಿತೆ. ಹಾಗೆಯೆ ಹೆಂಡತಿ ಗಂಡನಿಗಾಗಿ ಹುಸಿನಗೆಯ ತಾಜಮಹಲನ್ನು ಕಟ್ಟಿದರೆ ಆ ದುಃಖವನ್ನು ಮರೆಯಲು ಸಾಧ್ಯವೇ ಎಂಬ ನೋವಿನ ತೀವ್ರತೆಯನ್ನು ಕವಿ ಹೆಣ್ಣಿನ ಭಾವನೆ ಮತ್ತು ಐತಿಹಾಸಿಕ ಪ್ರತಿಮೆಯ ಮೂಲಕ ಸಶಕ್ತವಾಗಿ ಅಭಿವ್ಯಕ್ತಿಸಿದ್ದಾರೆ.ಇದು ಸಾಮಾನ್ಯ ಜನಜೀವನದಲ್ಲಿ ಸಂಭವಿಸಬಹುದಾದ ನೈಜ ಚಿತ್ರಣ.

ಗ್ರಾಮೀಣ ಜನಜೀವನದ ಹಿನ್ನಲೆಯಲ್ಲಿ ಮೂಡಿ ಬಂದಿರುವ ದ.ರಾ.ಬೇಂದ್ರೆಯವರ ಮತ್ತೊಂದು ಕವನ 'ಬಿಸಿಲುಗುದುರೆ'. ಮದುವೆಯ ಮೊದಲ ದಿನಗಳಲ್ಲಿದ್ದ ಉತ್ಸಾಹ, ಆಸೆಗಳು ಕಾಲಕ್ರಮದಲ್ಲಿ ಕಡಿಮೆಯಾಗುವ ವಾಸ್ತವ ಸತ್ಯವನ್ನು ಕವನದ ನಾಯಕನ ಮಾತಿನ ಮೂಲಕ ಸಾಗುವ ಅಭಿವ್ಯಕ್ತಿ ಹೀಗಿದೆ....

ಹಳ್ಳದ ದಂಡ್ಯಾಗ ಮೊದಲಿಗೆ ಕಂಡಾಗ
ಏನೊಂದು ನಗಿ ಇತ್ತಽ
ಏಸೋಂದು ನಗಿ ಇತ್ತಾ  ಏನೊಂದು ನಗಿ ಇತ್ತಾಽ
ಏರಕಿ ನಗಿ ಇತ್ತಽ
ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತಽ
ಹೋಗೇತಿ ಎತ್ತೆತ್ತಽ[೧]



೧ ಹಾಡುಪಾಡು-ಬಿಸಿಲುಗುದುರೆ ಪುಟ ೬

ಅವಳ ಮೊದಲಿನ ನಗೆಯ ಆಸೆ, ಉತ್ಸಾಹಕ್ಕೂ ಈಗಿನ ಮೌನಕ್ಕೂ ಇರುವ ಅಂತರವನ್ನು ಇಲ್ಲಿ ಅವಳ ನಾಯಕ ಗುರುತಿಸಿದ್ದಾನೆ. ಇಡೀ ಕವನದಲ್ಲಿ ನಗೆ ಮತ್ತು ಉತ್ಸಾಹಗಳು ಭೂತದ ಕ್ರಿಯೆಯಾಗಿರುವುದು. ಈಗಿನ ದಾರುಣ ಜೀವನದ ಹೊಡೆತಗಳಿಗೆ ಧ್ವನಿ ರೂಪಕವಾಗಿದೆ. ಇಡೀ ಬದುಕನ್ನೇ, ವ್ಯಕ್ತಿತ್ವವನ್ನೇ ಕಬಳಿಸುವ ದಾರುಣ ಹೊಡೆತವಿದು. ಕಣ್ಣು, ಮೋರೆ, ತುಟಿ, ಉಡಿಗೆ, ನಡಿಗೆ ಇವುಗಳಲೆಲ್ಲ ಹಿಂದೆ ಇದ್ದಂಥ ಮಿಂಚು, ಬೆಳಕನ್ನು ಮರೆ ಮಾಡಿಬಿಟ್ಟಿರುವಂಥದ್ದು.

ಈ ಕವನ ಸಂಪೂರ್ಣವಾಗಿ ಗ್ರಾಮೀಣ ಚಿತ್ರಣವನ್ನೇ ಕೊಡುತ್ತದೆ. ಕವಿಯ ಪರಿಸರ ಪ್ರಜ್ಞೆಗೆ ಇದು ಒಂದು ಉತ್ತಮ ಉದಾಹರಣೆ. ವಿವಾಹ ಪೂರ್ವದ ಸಂತೋಷವನ್ನು ಸಮೀಕರಿಸಿಕೊಂಡು ಬದುಕಿನ ವಾಸ್ತವದ ನೋವನ್ನು ಕಟ್ಟಿಕೊಡುವ ಕವಿ ಮುಂದೆ

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿಯ್ಯಾಗಿ
ಸುಟ್ಟು ಹಪ್ಪಳದ್ಹಾಂಗ ಸೊರಗಿದಿ ಸೊಪ್ಹಾಂಗ
ಬಂತಂತ ಮುಪ್ಪು ಬ್ಯಾಗ [೧]

ನಗೆಯು ಮಾಯವಾದುದಕ್ಕೆ ಬಾಳ್ವೆಯ ಹಲವು ನೋವುಗಳನ್ನು ಕಾರಣವಾಗಿ ಕೊಡುವ ಈ ಕವನದಲ್ಲಿ ಗಂಡು ಮಾತ್ರ ಅದೆಲ್ಲವನ್ನೂ ಅವಳ ಅನುಭವವೆಂಬಂತೆ ನೋಡುತ್ತಿದ್ದಾನೆ. ಬಾಳಿನ ಬಡತನದ ಬೇಗೆಯಲ್ಲಿ ಬೆಂದ ಹೆಣ್ಣಿನ ಸ್ಥಿತಿಯನ್ನು 'ಸುಟ್ಟು ಹಪ್ಪಳದ್ಹಾಂಗ', 'ಸೊರಗಿದಿ ಸೊಪ್ಹಾಂಗ'..ಎಂಬ ನಿತ್ಯ ಜೀವನದ ಉಪಮೆಗಳ ಮೂಲಕ ವರ್ಣಿಸುವ ಕವಿ ಬಡತನದ ಆಳವಾದ ನೋವಿನ ಚಿತ್ರಣವನ್ನು ಈ ಕವಿತೆಯಲ್ಲಿ ಪ್ರತಿಬಿಂಬಿಸಿದ್ದಾರೆ. ಕಳೆದು ಹೋದ ಸುಖದ ದಿನಗಳನ್ನು ಮತ್ತೆ ಪಡೆಯಬೇಕೆಂಬ ಹಂಬಲ ವಾಸ್ತವ ಪ್ರಜ್ಞೆ ಇವುಗಳಿಂದಾಗಿ ಕವನ ಯಶಸ್ವಿಯಾಗಿ ಮತ್ತು ಅರ್ಥಪೂರ್ಣವಾಗಿ ಮೂಡಿ ಬಂದಿದೆ.

'ಬಡತನ ಒಡೆತನ ಕಡೆತನಕುಳಿದಾವೇನ
ಎದೆ ಹಿಗ್ಗು ಕಡೆ ಮುಟ್ಟ
ಬಾಳಿನ ಕಡಲಾಗ ಅದನ ಮುಳುಗಿಸಬ್ಯಾಡ
ಕಡೆಗೋಲು ಹಿಡಿಹುಟ್ಟ' [೨]

ಸಾಗರವನ್ನು ದಾಟಬೇಕಾದರೆ ಕಡೆಗೋಲು ಹಿಡಿಹುಟ್ಟು ಎಷ್ಟು ಮುಖ್ಯವೋ ಹಾಗೆ ಸಂಸಾರದ ಸಾಗರವೂ ಸಾಗಬೇಕಾದರೆ ಧೈರ್ಯ, ಸ್ಥೈರ್ಯಗಳಿಂದ ಕೂಡಿದ ಸಾಮರಸ್ಯಗುಣವೂ ಮುಖ್ಯ. ಆದರೆ ಈ ನಡುವೆ ಬಂದು ಹೋಗುವ ಬಡತನ, ಸಿರಿತನ ಶಾಶ್ವತವಲ್ಲ ಎಂಬ ಕವಿಯ ಕಲ್ಪನೆ ಬೇಂದ್ರೆಯವರ ಆದರ್ಶ ಜೀವನ ಕಲ್ಪನೆಗೆ ಕನ್ನಡಿ ಹಿಡಿದಂತಿದೆ.

ಈ ಮೇಲಿನ ಆಶಯವುಳ್ಳ ಮತ್ತೊಂದು ಕವನ, 'ನಾನು ಬಡವಿ'. ಈ ಕವನ ಗೃಹಿಣಿಯೊಬ್ಬಳು ಭಾವನಾತ್ಮಕ, ಕೌಟಂಬಿಕ ಬಾಂಧವ್ಯ ಅನಿವಾರ್ಯವಾದಾಗ ಭಾವನಾತ್ಮಕ ಬಾಂಧವ್ಯವಾಗಿ ಪರಿಣಮಿಸಿ, ಬಡತನ



೧ ಹಾಡು ಪಾಡು-ಬಿಸಿಲುಗುದುರೆ ಪುಟ ೧೦
೨ ಹಾಡು ಪಾಡು ನನ್ನ ಕೈ ಹಿಡಿದಾಕೆ ಪುಟ ೧೧

ಸಿರಿತನಕ್ಕಿಂತ ಮಿಗಿಲಾದ ಬದುಕನ್ನು ಸಾರ್ಥಕಗೊಳಿಸಲು ಪರಸ್ಪರ ನಡುವಿನ ಒಲವು ಪ್ರೀತಿ ಮುಖ್ಯ.

ನಾನು ಬಡವಿ ಆತ ಬಡವ
ಒಲವೇ ನಮ್ಮ ಬದುಕು
ಬಳಸಿ ಕೊಂಡವದನೆ ನಾನು
ಅದಕು ಇದಕು ಎದಕು[೧]

ದಾಪಂತ್ಯ ಜೀವನದ ಸುಖ ಸಂತೃಪ್ತಿಗೆ ಕಾರಣೀಭೂತವಾದುದು ಸಂಪತ್ತಲ್ಲ, 'ಒಲವು' ಎಂಬ ಆಶಯವನ್ನು ಸಾದರ ಪಡಿಸುವ ಈ ಕವನ ಕವಿಯ ಜೀವನ ದೃಷ್ಟಿಯ ಅಗಾಧತೆಯನ್ನು ಪ್ರತಿಬಿಂಬಿಸುತ್ತದೆ. ಒಲುಮೆ ಅಸ್ತ್ರ ಬಳಸಿ ಬಡತನವನ್ನು ಮೆಟ್ಟನಿಂತ ಹೃದಯ ಶ್ರೀಮಂತಿಕೆ ಅನೋನ್ಯತೆಯ ಹಾಗೂ ಅದ್ವೈತದ ಪ್ರತೀಕವೆನಿಸಿದೆ. ಬಡ ದಂಪತಿಗಳಿಗೆ ಒಲವೇ ಸಂಪತ್ತು. ಅದು ಬದುಕನ್ನು ಮಿತಿಗೊಳಿಸಿಕೊಂಡ ರೀತಿ. ಅನ್ನಯೋನ್ಯತೆಯ ಬೆಸುಗೆ. ಹೀಗೆ ಕವಿಯ ಜೀವದಲ್ಲಿ ಹಾಸುಹೊಕ್ಕಾಗಿರುವ ಬಡತನ ಮತ್ತು ಅದನ್ನು ಆದರ್ಶಮಯ ನೆಲೆಗೆ ಒಗ್ಗಿಸಿಕೊಂಡ ಜೀವನ ಪ್ರೀತಿಯನ್ನು ಧ್ವನಿಪೂರ್ಣವಾದ ಭಾವನೆಗಳಲ್ಲಿ ಕವಿ ಹಿಡಿದಿರಿಸಿದ್ದಾರೆ. ಇಲ್ಲಿ ಹೆಣ್ಣಿನ ಮೂಲಕ ಅವಳ ಸಂತೃಪ್ತಿಯನ್ನು ಹೇಳಿಸಿರುವುದು ಕೂಡ ಔಚಿತ್ಯಪೂರ್ಣ.

ದ.ರಾ.ಬೇಂದ್ರೆಯವರ ಅತಿ ಉತ್ತಮ ಕವನಗಳಲ್ಲಿ 'ಸಖೀಗೀತ' ಎಂಬ ಅನನ್ಯ ಖಂಡ ಕಾವ್ಯದ ರಚನೆ ವಿಶಿಷ್ಟವಾದುದು. ಕವಿಯ ಪರಿಸರ ಜೀವನ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಇದರ ಪ್ರಸ್ತಾಪವೂ ಮುಖ್ಯ. ಬೇಂದ್ರೆಯವರು ಸಖೀಗೀತವನ್ನು ಸಖ್ಯ ಆವರಣದೊಳಗೆ ವ್ಯಾಖ್ಯಾನಿಸಿರುವ ಕಾವ್ಯಾಭಿವ್ಯಕ್ತಿಯ ಬಗೆಗೆ ವ್ಯಕ್ತಪಡಿಸಿರುವ ವಿಚಾರಗಳು ತುಂಬಾ ಅರ್ಥಪೂರ್ಣವಾದುದು.. ಸಖೀಗೀತದ ಸಖ್ಯದ ಅಖ್ಯಾನವನ್ನು ವೈಯುಕ್ತಿಕ ಮತ್ತು ಸಾಮಾಜಿಕ ನೆಲೆಯಲ್ಲಿ ಕಾಣುತ್ತೇವೆ.

ಸಖೀ ನಮ್ಮ ಸಖ್ಯದ ಅಖ್ಯಾನ, ಕಟುಮಧುರ
ವ್ಯಾಖ್ಯಾನದೊಡಗೂಡಿ ವಿವರಿಸಲೇ..
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟು
ತೊಡವಾಗಿ ತಿರುಗೊಮ್ಮೆ ನಾ ಧರಿಸಲೇ[೨]

ಸಖೀಗೀತಕಟುಮಧುರ ಅಖ್ಯಾನವಾಗಿ ಕರುಳಿನ ತೊಡಕನ್ನು ಕುಸುರಾಗಿ ಬಿಡಿಸುವ ಕವಿಯ ಕಾವ್ಯೋದ್ದೇಶ ಸ್ಪಷ್ಟವಾದುದು.ಜೀವನದಲ್ಲಿ ಅನುಭವವನ್ನು ಪಡೆಯುವಾಗ ಅದನ್ನು ಅರಿತುಕೊಂಡು ಪ್ರತಿಕ್ರಿಯೆ ತೋರಿಸುವ ವ್ಯವಧಾನ ತುಂಬಾ ವಿರಳ ತೊಡಕು ಬಿಡಿಸಿ ಕಲಾತ್ಮಕ ಮೆರಗು ನೀಡುವುದುಅಷ್ಟೇ ಕಠಿಣ. ಆದರೆ ನೆನಪಿನ ಸಹಾಯದಿಂದ ಮರಳಿ ಪಡೆದ ಅನುಭವಕ್ಕೆ ಯಾವ ರೀತಿಯ ಸ್ವರೂಪ ಬೇಕಾದರೂ ಕೊಡಬಹುದು. ಸಖೀಗೀತ ಅಂಥ ಒಂದು ಕಾವ್ಯ ಪ್ರಯತ್ನವಾಗಿದೆ.

ಇರುಳು ತಾರೆಗಳಂತೆ ಬೆಳಕೊಂದು ಮಿನುಗುವದು
ಕಳೆದ ದುಃಖಗಳಲ್ಲಿ ನೆನೆದಂತೆಯೆ



೧ ಅಂಬಿಕಾತನಯದತ್ತರ ಸಮಗ್ರಕಾವ್ಯ ಸಂಪುಟ ೩. ನಾನು ಬಡವಿ ಪುಟ ೬೯
೨. ಸಖೀಗೀತ ೧೯೩೭ ಪುಟ ೧

ಪಟ್ಟ ಪಾಡೆಲ್ಲವು ಹುಟ್ಟು ಹಾಡಾಗುತ
ಹೊಸದಾಗಿ ರಸವಾಗಿ ಹರಿಯುತಿವೆ [೧]

ಪಟ್ಟ ಪಾಡೆಲ್ಲವನ್ನು ಹಾಡಾಗಿಸುವ ಪ್ರತಿಭೆ ಬೇಂದ್ರೆಯವರದು. ಸಖಿಯನ್ನು ಉದ್ದೇಶಿಸಿ ಸಖೀಗೀತ ಆರಂಭಿಸಿದ ಕವಿ ರಸಿಕ ಅಥವಾ ಸಹೃದಯನ ಆನಂದಕ್ಕಾಗಿ ತನ್ನ ಕಾವ್ಯವಿದೆ ಎಂಬುದನ್ನು ಹೇಳಿದ್ದಾರೆ.

ನುಡಿದು ಬೇಸತ್ತಾಗ ದುಡಿದುಡಿದು ಸತ್ತಾಗ
ಜನರ ಹಿಗ್ಗಿನ ಹಾಡು ನೀಡಾಂವಾ

ಸಖೀಗೀತ

ಎನ್ನ ಪಾಡೆನಗಿರಲಿ ಅದರ ಹಾಡನ್ನಷ್ಟೇ
ನೀಡುವೆನು ರಸಿಕ ನಿನಗೆ
ಕಲ್ಲು ಸಕ್ಕರೆಯಂಥ ನಿನ್ನದೆಯು ಕರಗಿದರೆ
ಆ ಸವಿಯ ಹಣಿಸು ನನಗೆ[೨]

ಎಂದು ಹೇಳುವಲ್ಲಿ ಕವಿಗೂ ಸಹೃದಯನಿಗೂ ಇರಬೇಕಾದ ಅವ್ಯಾಜ್ಯ ಸಂಬಂಧವನ್ನು ಸ್ಥಾಪಿಸುವುದೇ ಆಗಿದೆ.

ಸುಖದುಃಖ ಸಂಗಮವಾದ ಹೃದ್ರಂಗಮ
ಪಾವನವೆಂಬೆನು ಯಾವಾಗಲೂ

ಸಖೀಗೀತ

ಇದು ಬದುಕಿನ ಹಂಬಲ, ಸಾರ್ಥಕತೆ ಹಾಗೂ ಸ್ವೀಕಾರ ಯೋಗ್ಯ ಅರಿವು. ಸುಖದುಃಖಗಳ ಸಂಗಮವಾದ ಈ ಜೀವನ ಪಾವನವಾದದ್ದು. ಇದನ್ನೇ ಇನ್ನೊಂದು ಸಂದರ್ಭದಲ್ಲಿ 'ಇದು ಜೀವನ ಪವನದಂತೆ ಪಾವನ' ಎಂದು ಹೇಳುವಲ್ಲಿ ಮಾನವನಪರಿಪೂರ್ಣಬದುಕನ್ನು ಸಾರಿರುವುದೇ ನವೋದಯ ಕವಿಗಳ ಜೀವನ ದೃಷ್ಟಿ, ಮೌಲಿಕತೆ.

ಸಪ್ಪೆ ಬಾಳುವೆಗಿಂತ ಉಪ್ಪು ನೀರೂ ಲೇಸು
ಬಿಚ್ಚು ಸ್ಮೃತಿಗಳ ಹಾಯಿ ಬೀಸೋಣ ಬಾ
ಬೀಸೋಣ ಈಸೋಣ ತೇಲೋಣ ಮುತ್ತಿನ
ತವರ್ಮನೆ ಮುಟ್ಟನು ಮುಳುಗೋಣ ಬಾ[೩]

ಕವಿಗಿರುವ ಜೀವನಶ್ರದ್ಧೆ ಅಗಾಧವಾದ ಅಪರಿಮಿತ ಸಖೀಗೀತ ಒಂದು ಸ್ಮೃತಿ ಚಿತ್ರಮಾಲೆಯಾಗಿದೆ. ಅದು ಕಥಾವಿನ್ಯಾಸ ಹೊಂದಿರದ ಅನುಭವ ಕಥನ, ವೈವಿಧ್ಯಮಯ ನಿರೂಪಣೆ. ಕವಿ ತನ್ನ ಪತ್ನಿಯೊಂದಿಗೆ ನಡೆಸುವ ಸಂವಾದದಲ್ಲಿ ಅವಳಿಗೆ ದಾಂಪತ್ಯ ಜೀವನ ಒಂದೇ ಮುಖ್ಯವಾದರೆ ಕವಿಯ ವ್ಯಕ್ತಿತ್ವ ವಿಭಿನ್ನ



೧. ಸಖೀಗೀತ ೧೯೩೭ ಪುಟ ೧
೨ ಸಖೀಗೀತ ಕೀರ್ತಿನಾಥ ಕುರ್ತುಕೋಟಿ ದ.ರಾ.ಬೇಂದ್ರೆ ಪುಟ ೬೫
೩. ಸಖೀಗೀತ ೧೯೩೭ ಪುಟ ೧

ನೆಲೆಯಲ್ಲಿ ವಿಸ್ತೃತರೂಪ ಪಡೆಯುವುದನ್ನು ಕಾಣಬಹುದು. ಸಖೀಗೀತವನ್ನು ಬರೆಯುವಾಗ ಕವಿ ಬಾಳಿನ ಬಡತನದ ವಿಭಿನ್ನ ಸ್ತರಗಳ ದಾರುಣತೆಯನ್ನು ಉಂಡವರು ಹಾಗಾಗಿಯೇ ಅವರ ಕಾವ್ಯಕ್ಕೆ ಒಂದು ವಿಶಿಷ್ಟಶಕ್ತಿ ಇದೆ.

ತಾಂಡವ ನಡೆಸಿದ ಝುಂಝುವಾತದ
ಕಾಲಿನ ಹುಲುಗುಜ್ಜೆ ನಾವಾಗಿರೆ[೩]

ಎಂಬ ಆರಂಭದ ಸಾಲುಗಳಲ್ಲೇ ಇದು ಸ್ಪಷ್ಟವಾಗಿದೆ. 'ಬೆಂದರೆ ಬೇಂದ್ರೆ ಆದಾನು' ಎನ್ನುವಂತೆ ನೋವನ್ನುಂಡು ನಗೆ ಚಿಮ್ಮಿಸುವ ಕಾವ್ಯಭಿವ್ಯಕ್ತಿ ಕವಿಯದು. ಇದುವರೆಗಿನ ಕವಿತೆಗಳ ಚರ್ಚೆಯ ಮೂಲಕ ಕವಿಯ ಜೀವನ ದೃಷ್ಠಿ ಅವರ ಕಾವ್ಯದಲ್ಲಿನ ಜೀವನ ವಿವರ ಮತ್ತು ಆರ್ಥಿಕತೆಯೆ ಅನಿವಾರ್ಯವಾದಾಗ ಕೌಟುಂಬಿಕ ನೆಲೆಯಲ್ಲಿ ಅವರು ಕಂಡುಕೊಂಡಿರುವ ಒಲವಿನ ದರ್ಶನ ಅಪ್ರತಿಮವಾದದು.ದ.ರಾ. ಬೇಂದ್ರೆಯವರು ತಮ್ಮ ಸಹಜ ಅಭಿವ್ಯಕ್ತಿ ಮೂಲಕ ದಾಂಪತ್ಯ ಜೀವನ, ಗಂಡು ಹೆಣ್ಣಿನ ಸಂಬಂಧ, ಅವರ ನೋವು ನಲಿವುಗಳನ್ನು ಚಿತ್ರಿಸಿದಂತೆಯೇ ಸಾಮಾಜಿಕ ಪ್ರಜ್ಞೆಯ ಹೊಳಹುಗಳ ಪ್ರತಿಬಿಂಬಿಸುವ ಕವನಗಳನ್ನು ಸಾಮಾಜಿಕ ಚಿಂತನೆಯುಳ್ಳ ಕವಿಯಾಗಿದ್ದರು ಎಂಬುದಕ್ಕೆ ಈ ಕವನಗಳೇ ಸಾಕ್ಷಿಭೂತವಾಗಿವೆ. ಸಂಸಾರದಲ್ಲಿ ಹಾಸುಹೊಕ್ಕಾದ ಬಡತನದ ಬೇಗೆಯ ಜೊತೆಯಲ್ಲಿ ತನ್ನ ಜೀವಮಾನವನ್ನು ಸವೆಸುವ ಹೆಣ್ಣಿನ ಬದುಕನ್ನು ಮಾನವೀಯ ನೆಲೆಯಲ್ಲಿ ನಿಂತು ಸಮಾಧಾನ ಸಾಂತ್ವನ ಹೇಳುತ್ತ ವಾತಾವರಣವನ್ನು ಸೃಷ್ಟಿಯುವ ಕವಿ ಪ್ರಜ್ಞೆ. ಅದೇ ಹೆಣ್ಣುವಿಧವೆಯಾದಾಗ ಸಾಂಪ್ರಾದಾಯಿಕ ಕಟ್ಟುಪಾಡುಗಳಿಗೆ ಸಿಲುಕಿ ನರಳುವ ಶೋಚನೀಯ ಸ್ಥಿತಿಯನ್ನು ಒಳಗೊಂಡ ಪ್ರತಿಭೆ 'ಹೆಣದಹಿಂದೆ' ಮತ್ತು 'ಪುಟ್ಟವಿಧವೆ' ಎಂಬ ಕವನಗಳಿಂದ ತಿಳಿದು ಬರುತ್ತದೆ.

ನಾಲ್ಕು ಮಂದಿ ಹೆಗಲ ಮೇಲೆ
ಮುಂದೆ ಹೆಣವು ಹಿಂದೆ ಹೆಣ್ಣು
ಬಿರಿಯೆ ತಾಯಿ ನಿನ್ನ ಎದೆಯ
ಬಾಗಿಲನ್ನು ತೆರೆಯೆ ತಾಯಿ

ಹೀಗೆ ನಿರ್ಗತಿಕಳಾದ ಹೆಣ್ಣು ತನ್ನನ್ನು ಈ ಇಹದ ಬದುಕಿನಿಂದ ಪಾರು ಮಾಡುವಂತೆ ಭೂಮಿತಾಯಿಗೆ ಮೊರೆಯಿಡುತ್ತಾಳೆ. ಮುಂದಿನ ಅವಳ ಭವಿಷ್ಯ ಕುರಿತ ಕವಿಯ ಅಭಿವ್ಯಕ್ತಿ ಹೀಗಿದೆ..

ಹೆಣಕೆ ಉಂಟು ಮಸಣ ಬಟ್ಟೆ
ಜನಕೆ ತಮ್ಮ ಮನೆಯ ಹಾದಿ
ಅವಳಿಗಾವ ಕೆರೆಯ ಹಾದಿ?

ವಿಧವೆಯ ಮುಂದಿನ ಬಾಳು ಸಾವಿನ ಹಾದಿಯನ್ನು ಅರಸುವಂಥ ನಿಷ್ಠೂರ ಸ್ಥಿತಿ ವಿಧವೆಯ ಶೋಚನೀಯ ಸ್ಥಿತಿಫಲ. ಸಾಂಪ್ರದಾಯಿಕ ಕಟ್ಟುಪಾಡು ಮತ್ತು ಅಮಾನವೀಯ ಜನರ ನಡುವಿನ ಫಲ. ಅದೇ ಈ ಕವಿತೆಯ ಮೂಲ ಆಶಯ.



೩. ಸಖೀಗೀತ ೧೯೩೭ ಪುಟ ೧

ಇದೇ ದೆಸೆಯಲ್ಲಿ ಗಮನಿಸಬಹುದಾದ ಮತ್ತೊಂದು ಕವನ 'ಪುಟ್ಟವಿಧವೆ'. ಸಮಾಜದ ಅನಿಷ್ಟ ಪದ್ಧತಿಯ ಫಲವಾಗಿ ಪುಟ್ಟ ಮುತ್ತೈದೆಯಾದ ಹೆಣ್ಣು ಮಗಳುಪುಟ್ಟ ವಿಧವೆಯೂ ಆದಾಗ ಪುನಃ ಧರ್ಮ ಸಮಾಜ ಹಾಗೂ ಅದರ ಗೊಡ್ಡು ಸಂಪ್ರದಾಯಗಳ ಬಲೆಗೆ ಸಿಲುಕಿ ಆಚಾರ್ಯನ ಕಾಮಕ್ಕೆ ಬಲಿಯಾಗುವ ದುರಂತ ಚಿತ್ರಣ ಹೃದಯುಂಗಮ. ಇಂಥ ಅನಿಷ್ಟ, ಸಂಪ್ರದಾಯಗಳ ಪಾಲಿಸುವ ಪರಂಪರೆಯ ಕಟ್ಟು ಪಾಡುಗಳು ಪ್ರಚಲಿತವಿದ್ದ ಕಾಲದಲ್ಲಿ ಕವಿಯ ರಚನೆಯ ಕಂಡು ಬಂದದ್ದು. ತಮ್ಮ ಕಾವ್ಯದಲ್ಲಿ ಸಹಜವಾಗಿ ಇಂತಹ ಶೋಷಣೆಯ ಸಮಾಜವನ್ನು ಕವಿಕಟ್ಟಿಕೊಡಲು ಯತ್ನಿಸಿರುವುದು ಕವಿಯ ಸಾಮಾಜಿಕ ಕಳಕಳಿಗೆ ಪೂರಕವಾಗಿದೆ.

ಹೀಗೆ ಬೇಂದ್ರೆಯವರು ಸೃಜನಶೀಲ ಕವಿಯಾಗಿ ಆದರ್ಶ ದಾಂಪತ್ಯ ಜೀವನವನ್ನಷ್ಟೆ ಅಲ್ಲದೆ ಗಂಡು ಹೆಣ್ಣು ಅನುಭವಿಸುವ ನೋವು ನಲಿವುಗಳನ್ನು ಆರ್ಥಿಕ ಮತ್ತು ಸಾಮಾಜಿಕ ಹಿನ್ನಲೆಯ ಆಧಾರದ ಮೇಲೆ ಪಡಿಮೂಡಿಸಿರುವುದು ಸಹಜವೆನಿಸಿದೆ.

ದ.ರಾ.ಬೇಂದ್ರೆಯವರಂತೆ ನವೋದಯ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಕವಿ ಕೆ.ಎಸ್.ನ.ರವರು ಪ್ರೇಮದ ತೋಟದಲ್ಲಿ ಕೃಷಿ ಮಾಡಿ ಮಲ್ಲಿಗೆ ಇರುವಂತಿಕೆಗಳನ್ನು ಅರಳಿಸಿದ ಕವಿ ಗಂಡು ಹೆಣ್ಣಿನ ಸಂಬಂಧ ಮಕ್ಕಳು, ಮನೆ ತೌರು, ದಾಂಪತ್ಯ ಸುಖ, ವಿರಹ, ಸಿನಿಕತನ, ಅಗಲಿಕೆ, ಅಂಜಿಕೆ, ಚಿತ್ರಿತವಾಗಿರುವುದು ಸಂಭವನೀಯ, ಸಾಮಾನ್ಯ ಜೀವನದ ಘಟನೆಗಳೇ. ಆದರೆ ಇವರ ಪ್ರಾರಂಭದ ಮೈಸೂರು ಮಲ್ಲಿಗೆ ಕವನ ಸಂಕಲನದಲ್ಲಿ ರಚಿತವಾಗಿರುವ ಕವನಗಳನ್ನು ಗಮಿನಿಸಿದಾಗ ಇವು ಹೆಣ್ಣು ಮತ್ತು ಪ್ರಕೃತಿಯ ವರ್ಣನೆಗಳು, ಗ್ರಾಮೀಣ ಪರಿಸರದ ವಸ್ತುಗಳೇ. "ಜಿಎಸ್ಎಸ್‌ರವರು ಹೇಳುವಂತೆ ಕೆಎಸ್‌ನ ಅವರ ಕವಿತೆ ಒಂದು ರೀತಿಯಲ್ಲಿ ಜಾನಪದ ಸಂಪ್ರದಾಯಕ್ಕೆ ಸೇರಿದ್ದು. ಇದು ಅವರು ಬಳಸುವ ಭಾಷೆಯಲ್ಲಿ ಕಾಣಿಸುವುದಿಲ್ಲ. ಅವರ ಕವಿತೆಯ ವಸ್ತುಗಳಲ್ಲಿ ಕಾಣುತ್ತದೆ. ಅವರ ಭಾಷೆ ಆಡುಮಾತಿಗೆ ಸಮೀಪವಾದ ಶಿಷ್ಟಭಾಷೆಯಂತೆ ತೋರಿದರೂ ಅವರ ಅನುಭವದ ಸಾಮಗ್ರಿ ಹಿಂದಿನ ಕೆಲವು ಸಂಗ್ರಹಗಳಮಟ್ಟಿಗೆ ನಗರ ಪರಿಸರದಲ್ಲ, ಗ್ರಾಮಾಂತರ ಪರಿಸರದ್ದು. ಅವರ ಕವಿತೆಗಳಲ್ಲಿ ಬರುವ ಹೆಣ್ಣುಗಳ ಹೆಸರು ಜಾನಕಿ, ಗೌರಿ, ಕಾಮಾಕ್ಷಿ, ಸೀತಾದೇವಿ, ಚಂದಮ್ಮ,, ಇವರೆಲ್ಲಾ ಹಳ್ಳಿಯ ಬಾವಿಯಿಂದ ನೀರು ಸೇದಿ ತರುವ ಹಸಿರು ಕುಪ್ಪಸದ, ತಲೆತುಂಬ ಹೂ ಮುಡಿಯುವ , ಬಳೆಗಾರ ಚೆನ್ನಯ್ಯನಿಂದ ಒಪ್ಪುವ ಬಳೆ ತೊಡುವ ಚೆಲುವೆಯರು... ಹೀಗೆ ಹಳ್ಳಿಯ ಪರಿಸರ ಮತ್ತು ಜನಜೀವನ ಚಿತ್ರಣಗೊಂಡಿದೆ ಎಂಬುದು ಅವರ ಅಭಿಪ್ರಾಯವಾಗಿದೆ".

ಈ ಹಿನ್ನಲೆಯಲ್ಲಿ ಗಮನಿಸುವುದಾದರೆ ಮೈಸೂರು ಮಲ್ಲಿಗೆಯ ಕವನಗಳೆಲ್ಲವೂ ಸಹಜವಾಗಿಯೇ ಹಳ್ಳಿಯ ಬದುಕನ್ನೊಳಗೊಂಡಿವೆ. ಈ ಸಂಕಲನದ ಗೃಹಲಕ್ಷ್ಮಿ ಕವನ ಹೀಗಿದೆ....

ಕರೆದಾಗ ತೌರು ಮನೆ ನೆನೆದಾಗ ನನ್ನ ಮನೆ
ಹಳ್ಳಿಯೆರಡರ ಮುದ್ದು ಬಳ್ಳಿಯವಳು
ಮುಚ್ಚು ಮರೆಯಿಲ್ಲದೆಯೆ ಅಚ್ಚ ಮಲ್ಲಿಗೆಯಂತೆ
ಅರಳುತಿಹುದವಳ ಬದುಕು

ಬಂಗಾರದೊಡವೆಗಳ ಬಯಸಿಲ್ಲ ಮನಸಿನಲ್ಲಿ

ಬಂಗಾರದಂಥ ಹುಡುಗಿ

ನನ್ನೊಡವೆ ನನ್ನ ಬೆಡಗಿ [೧]

ಎರಡು ಊರಿನ ಪ್ರಸ್ತಾಪ ಕವನದಲ್ಲಿದೆ. ಗಂಡು ಹೊನ್ನೂರಿನವನಾದರೆ ಹೆಣ್ಣು ನವಿಲೂರಿನವಳು ಹೆಂಡತಿಗೆ ಮಾತ್ರ ಎರಡು ಊರಿನ ಸಂಬಂಧ. ಗಂಡನಿಗೆ ಒಂದು ವಾಸ್ತವ, ಮತ್ತೊಂದು ಕಲ್ಪನೆಯಷ್ಟೇ. ಇದಕ್ಕಾಗಿಯೇ ಕವಿ ಹೇಳಿರುವುದು ಇಲ್ಲಿ ಹಳ್ಳಿಯೆರಡರ ಮುದ್ದುಬಳ್ಳಿ ಎಂಬ ಮಾತು ಮುಖ್ಯವಾದುದು. ಇಲ್ಲಿ ಪರಸ್ಪರ ಆಕರ್ಷಣೆ, ನಿರೀಕ್ಷೆ, ದಾಂಪತ್ಯದ ಕೌತುಕಸುಖ ಎದ್ದು ಕಾಣುವ ಅಂಶಗಳು.

ಶಾನುಭೋಗರ ಮಗಳು ಮತ್ತೊಂದು ಕವನವು ಹಳ್ಳಿಯ ಚಿತ್ರಣವನ್ನು ಕೊಡುತ್ತದೆ. ಇದರ ಶೀರ್ಷಿಕೆಯಲ್ಲಿಯೇ ಅದನ್ನು ಹೇಳುತ್ತದೆ.

ಶಾನುಭೋಗರ ಮಗಳು, ತಾಯಿಯಿಲ್ಲದ ಹುಡುಗಿ

ರತ್ನದಂತಹ ಹುಡುಗಿ ಊರಿಗೆಲ್ಲ

ಬಲುಜಾಣೆ, ಗಂಭೀರೆ, ಹೆಸರು ಸೀತಾದೇವಿ

ಹನ್ನೆರಡು ತುಂಬಿಹುದು ಮದುವೆಯಿಲ್ಲ

ಹೀಗೆ ಮೈಸೂರು ಮಲ್ಲಿಗೆಯ ಹಲವಾರು ಕವನಗಳು ಹಳ್ಳಿಯ ಪರಿಸರದ ಹಿನ್ನಲೆಯೇ ಆದರೂ ಆ ಕಾಲದಲ್ಲಿ ವಿದ್ಯಾವಂತ ವೈದಿಕ ಮನೆತನದವಳು ಹಳ್ಳಿಯಲ್ಲಿದ್ದವು. ಶಾನುಭೋಗರ ಮಗಳು ಕವನವೇ ಇದಕ್ಕೆ ನಿದರ್ಶನ. ಇಷ್ಟೇಲ್ಲಾ ಆದರೂ ಕೆ.ಎಸ್.ನ. ಅವರ ಕಾವ್ಯದಲ್ಲಿ ಕಾಣುವುದು ಮಧ್ಯಮ ವರ್ಗದ, ನಗರ ಜೀವನ ಎಂಬುದು ಗಮನಾರ್ಹ. ಮೈಸೂರು ಮಲ್ಲಿಗೆಯ ನಾಯಕ ನಾಯಕಿಯರೆಂದರೆ ಪತಿ ಪತ್ನಿಯರೇ, ಪತಿ ಶಿಕ್ಷಣ ಪಡೆದವನಾದರೆ, ಪತ್ನಿ ಹಳ್ಳಿಯವಳೆಂಬ ಭಾವನೆ ಬರುತ್ತದೆ. ಆಧುನಿಕತೆ ಮತ್ತು ಸಂಪ್ರದಾಯಕತೆಗಳ ನಡುವೆ ಸಾಮರಸ್ಯ ತರುವುದೇ ಇವುಗಳ ಉದ್ದೇಶವಾಗಿರಬಹುದು. [೩]ಜಿಎಸ್‌ಎಸ್‌ರವರು ಹೇಳಿರುವಂತೆ "ಕೆ.ಎಸ್.ನ.ರವರ ಕವಿತೆಗಳ ವಸ್ತು ಜಾನಪದ ಹಿನ್ನಲೆಯುಳ್ಳದ್ದು.ಭಾಷೆಯ ಬಳಕೆ ಸಹಜವಾದದ್ದು. ಆದರೆ ಬೇಂದ್ರೆಯವರ ಭಾಷೆ ವಸ್ತುಗಳೆರಡೂ ಜಾನಪದ ಲಯಗಳಿಂದ ಕೂಡಿರುವುದೇ ಆಗಿವೆ."

ಕೆ.ಎಸ್‌ನ.ರವರ ಕವನಗಳು ಒಂದು ರಮ್ಯ ಲೋಕವನ್ನು ಭಾವನಾ ಪ್ರಪಂಚವನ್ನು ನಿರ್ಮಿಸುತ್ತವೆ. ಎಲ್ಲರೂ ಸಾಮಾನ್ಯರು ಬಯಸುವ ಸಂತೃಪ್ತ ಜೀವನದ ಚಿತ್ರಣ. ಬೇಂದ್ರೆಯವರ 'ಒಲವೇ ನಮ್ಮ ಬದುಕು' ಎಂಬಂತೆ ಎಲ್ಲಕ್ಕೂ ಒಂದೇ ಆಧಾರವಾಗಿದ್ದರೂ ಇಲ್ಲಿಯ ಕನಸುಗಳು ವಾಸ್ತವಾದರ್ಶಗಳಿಂದ ಮಿಶ್ರಿತವಾದವು. ಬದುಕಿಗೆ ಸಂಬಂಧಿಸಿದ ಜಟಿಲತೆಗಳು. ಇವರ ಕವನಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ ಎಂದು ಹಗುರವಾಗಿ ಭಾವಿಸುವಂತಿಲ್ಲ. ಪ್ರೀತಿಯ ಕನಸುಗಾರಿಕೆಯ ಜೊತೆಗೆ ವಾಸ್ತವತೆಯೂ ಕಂಡು ಬರುತ್ತದೆ.

ಹಳ್ಳಿಯ ಚೆಲುವೆಗೆ ಕವನದಲ್ಲಿ



೧ ಗೃಹಲಕ್ಷ್ಮಿ ಮಲ್ಲಿಗೆ ಮಾಲೆ ಪುಟ ೪

೨ ಶಾನುಭೋಗರ ಮಗಳು ಮಲ್ಲಿಗೆ ಮಾಲೆ ಪುಟ ೨೯

೩. ನವಕರ್ನಾಟಕ ಸಾಹಿತ್ಯ ಸಂಪದ ಶ್ರೀ. ಸಾ.ಅ. ಪುರಸ್ಕೃತ ಲೇಖಕರು ಕೆ.ಎಸ್.ನ.

ನವಿಲೂರಿನೊಳಗೆಲ್ಲ ನೀನೆ ಬಲು ಚೆಲುವೆ
ಅದಕೆ ನಮ್ಮಿಬ್ಬರಿಗೆ ನಾಳೆಯೇ ಮದುವೆ

(ಹಳ್ಳಿಯ ಚೆಲುವೆಗೆ)

ಎಂದು ತನ್ನನ್ನು ಮದುವೆಯಾಗಲಿರುವವಳ ರೂಪ ಲಾವಣ್ಯವನ್ನು ವರ್ಣಿಸುವುದರ ಜೊತೆಗೆ

ಹಗಲೆಲ್ಲ ದುಡಿಯುವೆನು ಕೆಸರ ಗದ್ದೆಯಲಿ
ಶ್ರಮವೆಲ್ಲ ಹೊನ್ನಹುದು ವರ್ಷದಂತ್ಯದಲಿ

(ಹಳ್ಳಿಯ ಚೆಲುವೆಗೆ)

ನಿನ್ನ ಹೊಟ್ಟೆಯ ತುಂಬ ನೊರೆಹಾಲು
ನನ್ನ ನುಡಿಯನು ಕೇಳು ನನ್ನೊಡನೆ ಬಾಳು

(ಹಳ್ಳಿಯ ಚೆಲುವೆಗೆ)

ಎಂದು ಪ್ರಮುಖ ಅವಶ್ಯಕತೆಗಳನ್ನು ಪೂರೈಸುವ ಭರವಸೆಯನ್ನು ನೀಡುತ್ತಾನೆ. ಆದರೆ ಅದಕ್ಕೆ ಪ್ರತಿಯಾಗಿ ಅವಳಿಂದ ಬಯಸುವುದು ಪ್ರೀತಿಯೊಂದನ್ನು ಮಾತ್ರ. ಪ್ರೀತಿಯ ಭರದಲ್ಲಿ ವಾಸ್ತವತೆಯನ್ನು ಕಡೆಗಣಿಸಿಲ್ಲ. ಒಲುಮೆಯೊಡನೆ ದುಡಿಮೆಯೂ ಅವನಲ್ಲಿ ಸ್ಥಾನವನ್ನು ಪಡೆದಿದೆ.

ಕೆ.ಎಸ್.ನ.ರವರ ಬಹುಪಾಲು ಕವನಗಳು ಗಂಡು ಹೆಣ್ಣಿನ ಬಗ್ಗೆ ಹಾಗೂ ದಾಂಪತ್ಯ ಜೀವನದ ಬಗ್ಗೆ ಹೇಳುತ್ತಿವೆಯಾದರೂ ಇವು ಹುಡುಗಾಟಿಕೆಯ ಕನಸುಗಳಷ್ಟೇ ಅಲ್ಲ.

ಒಂದು ಹೆಣ್ಣಿಗೊಂದು ಗಂಡು
ಹೇಗೋ ಸೇರಿ ಹೊಂದಿಕೊಂಡು
ಕಾಣದೊಂದು ಕನಸು ಕಂಡು
ಮಾತಿಗೊಲಿಯದು ಮೃತವುಂಡು
ದುಃಖ ಹಗುರವೆನುತಿರೆ
ಪ್ರೇಮವೆನಲು ಹಾಸ್ಯವೇ[೧]

ಹೀಗಾಗಿ ದಾಂಪತ್ಯ ಕೆ.ಎಸ್‌ನ.ರವರಿಗೆ ಕೇವಲ ಒಂದು ಗಂಡು ಹೆಣ್ಣಿನ ಸಂಬಂಧವಷ್ಟೇ ಅಲ್ಲ, ಅವರ ಸಹಬಾಳ್ವೆಯ ಸಾರ್ಥಕ್ಯಕ್ಕೆ ಸಂಬಂಧಿಸಿದ್ದು. ಈ ಸಾರ್ಥಕತೆ ಹಣದಿಂದ, ಅಧಿಕಾರದಿಂದ ದೊರೆಯುವಂತದ್ದಲ್ಲ. ಮಧ್ಯಮವರ್ಗ ಬದುಕಿನ ಪ್ರತಿದಿನದ ಕಷ್ಟ ಕಾರ್ಪಣ್ಯಗಳ ನಡುವೆಯೂ ಬದುಕಿಗೊಂದು ಚೆಲುವನ್ನು ಸೊಗಸನ್ನು ತಂದು ಕೊಡುವ ಈ ಒಲುಮೆ ಜೀವಪರವಾದದ್ದು. ಇದು ಬದುಕನ್ನು ಸ್ಪಷ್ಟಗೊಳಿಸುವುದಷ್ಟೇ ಅಲ್ಲದೆ, ಜೀವನ ಪ್ರೀತಿಯನ್ನು ಅರಳಿಸುತ್ತದೆ.



೧ ಬಾರೆನ್ನ ಶಾರದೆ : ಮಲ್ಲಿಗೆಮಾಲೆ ಪುಟ ೬

ಕೆ.ಎಸ್.ನ.ರವರ ರಮ್ಯತೆ ವಾಸ್ತವಿಕತೆಯಿಂದ ಹೊರತಾತುದಲ್ಲ.ಆ ವಾಸ್ತವವನ್ನು ಎದುರಿಸುವ ಮನೋಧರ್ಮಕ್ಕೆ ಸಂಬಂಧಿಸಿದ್ದು. ಹೀಗಾಗಿ ನರಸಿಂಹಸ್ವಾಮಿಯವರ ಕವನಗಳಲ್ಲಿ ಮೂಡಿ ಬರುವ ಚಿತ್ರ ಮಧ್ಯಮ ವರ್ಗದ ವಾಸ್ತವ ಜೀವನಕ್ಕೆ ಸಂಬಂಧಪಟ್ಟಂತಹ ಬಡತನ, ಆದಾಯಮೀರುವಖರ್ಚು, ಈಡೇರಿಸಿಕೊಳ್ಳಲಾಗದ ಆಸೆಗಳು... ಹೀಗೆ ಆಸೆ ಆಕಾಂಕ್ಷೆಗಳು ಎಲ್ಲರಿಗೂ ಇರುವಂಥದ್ದೇ. ಆದರೆ ಇಂತಹ ಅಂತಸ್ತು, ಐಶ್ವರ್ಯಗಳು ನಾವು ಸಾಮಾನ್ಯವಾಗಿ ಕಲ್ಪಿಸಿಕೊಳ್ಳುವುದಕ್ಕಿಂತ ಬೇರೆ ನೆಲೆಗಳಿಂದಲೂ ಲಭ್ಯವಾಗಬಹುದು. ಅದನ್ನು ಸ್ವೀಕರಿಸಲು ಸಿದ್ಧರಾಗಿದ್ದಾಗ ಮಾತ್ರ ಈ ಕುರಿತ ಕವಿಯ ಅಭಿವ್ಯಕ್ತಿ.

ಬಡತನವೊ ಸಿರಿತನವೊ ಯಾರಿರಲಿ, ಎಲ್ಲಿರಲಿ,
ದೊರೆಯಾಗಿ ಮೆರೆದವರು ನೀವಲ್ಲವೇ
ಗಂಡನಿಗೆ ಒಪ್ಪಾಗಿ, ಕಂದನಿಗೆ ದಿಕ್ಕಾಗಿ
ಪಯಣದಲಿ ಜೊತೆಯಾಗಿ ನಾನಿಲ್ಲವೇ[೧]

ಹೆಂಡತಿಯೊಬ್ಬಳು ಮನೆಯೊಳಗಿದ್ದರೆ
ನನಗದೆ ಕೋಟಿ ರೂಪಾಯಿ
ಹೆಂಡತಿಯೊಬ್ಬಳು ಹತ್ತಿರವಿದ್ದರೆ
ನಾನು ಒಬ್ಬ ಸಿಪಾಯಿ [೨]

ಹೆಂಡತಿಯೊಂದಿಗೆ ಬಡತನ ದೊರೆತನ
ಏನು ಭಯವಿಲ್ಲ
ಹೆಂಡತಿಯೊಲುಮೆಯ ಭಾಗ್ಯವನರಿಯದ
ಗಂಡನಿಗೆ ಜಯವಿಲ್ಲ[೩]

ಜೀವನ ಸಾಫಲ್ಯವನ್ನು ಅರ್ಥಪೂರ್ಣವಾಗಿ ಮನುಷ್ಯ ಸಂಬಂಧಗಳಲ್ಲಿ ಕಂಡು ಕೊಳ್ಳುವ ಕೆ.ಎಸ್.ನ.ರವರು ನಮ್ಮ ಭಾವ ಜಗತ್ತನ್ನು ಈ ರೀತಿ ಸಮೃದ್ಧಗೊಳಿಸುತ್ತ ಶ್ರೀಮಂತಿಕೆಯನ್ನು ಕಟ್ಟಿಕೊಡುತ್ತಾರೆ. ಮನುಷ್ಯ ಸಾಮಾಜಿಕವಾಗಿ ಆರ್ಥಿಕವಾಗಿ ಏನೇ ಆಗಿರಲಿ ಅವನ ಸದ್ಯದ ಜೀವನ, ಕುಟುಂಬದ ಜೀವನವೇ ಆಗಿರುವುದರಿಂದ ಕೌಟುಂಬಿಕ ಜೀವನದ ಬೇರುಗಳನ್ನು ಭದ್ರಪಡಿಸುವತ್ತಲೇ ನರಸಿಂಹಸ್ವಾಮಿಯವರ ಒಲವು. ಹಾಗಾಗಿ ಅವರ ದಾಂಪತ್ಯ ಗೀತೆಗಳು ವೈಯುಕ್ತಿಕ ಭಾವ ತೀವ್ರತೆಯ ಅಭಿವ್ಯಕ್ತಿ ಮಾತ್ರವಲ್ಲ, ಅದು ವ್ಯಕ್ತಿಯೊಂದಗಿನ ನಿತ್ಯದ ಸಂಸಾರ. ದಾಂಪತ್ಯದ ಅಸಲಿ ಒಡನಾಟ ಕುರಿತು ನಾವು ಅರ್ಥೈಸಿಕೊಳ್ಳುವಾಗ ಬೇಂದ್ರೆ ಮತ್ತು ಕೆ.ಎಸ್.ನ. ಇಬ್ಬರನ್ನೂ ಒಟ್ಟಿಗೆ ಅಧ್ಯಯನ ಮಾಡಬೇಕು. ಆಯ್ದುಕೊಂಡ ವಸ್ತುಗಳು ಒಂದೇ ಆಗಿದ್ದರೂ ಇಬ್ಬರ ಅಭಿವ್ಯಕ್ತಿಯೂ ವಿಭಿನ್ನ ಶೈಲಿಯವು. ಇಡಿಯಾದ ಬದುಕೇ ಅವರಿಗೊಂದು ಮಹಾಕಾವ್ಯ. ಅವುಗಳ ಅನುಭವ ಸ್ಪುರಣೆಯಷ್ಟೆ ಅಲ್ಲಿ ಮುಖ್ಯ. ವಿರೋಧಾಭಾಸಗಳಿಗೆ



೧ ಐರಾವತ : ನೀವಲ್ಲವೇ ಮಲ್ಲಿಗೆ ಮಾಲೆ ಪುಟ ೭೦
೨ ಐರಾವತ : ಗಂಡ ಹೆಂಡತಿ ಮಲ್ಲಿಗೆ ಮಾಲೆ ಪುಟ ೭೨
೩ ಐರಾವತ : ಗಂಡ ಹೆಂಡತಿ ಮಲ್ಲಿಗೆ ಮಾಲೆ ಪುಟ ೭೨

ಅಲ್ಲಿ ಎಡೆಯಿಲ್ಲ. ಬದುಕಿನ ಸಂಘರ್ಷಗಳು ಪರಸ್ಪರರಲ್ಲಿ ಆಶಾದಾಯಕ ಬೆಳಕಿನತ್ತ ಸಾಗುವುದೇ ಆಗಿದೆ. ಸರಸವೇ ಜನನ, ವಿರಸವೇ ಮರಣ ಎಂಬ ಕವಿಯ ಆಶಯ ಇದಕ್ಕೆ ಸಾಕ್ಷಿ.

ಶ್ರೀಮಂತಿಕೆ, ಬಡತನ, ಬೇಕುಗಳ ಪೂರೈಕೆ, ವಸ್ತು ಒಡವೆಗಳೆಲ್ಲವೂ ಪ್ರೀತಿಯ ಮುಂದೆ ನಗಣ್ಯ ಎಂಬುದನ್ನು ಇಬ್ಬರು ಕವಿಗಳು ಸಾರುತ್ತಾರೆ. ಕೆ.ಎಸ್.ನ. ಸಂಸಾರ ದಾಂಪತ್ಯ, ಅಗಲಿಕೆ, ಪುನರ್ಮಿಲನ, ಸೌಖ್ಯ, ಹೆಂಡತಿ ಪ್ರತಿಕ್ರಿಯೆ, ಮಾನವೀಯ ಹಂಬಲ, ಮಾರ್ಮಿಕ ಸುಖ, ನಿರೀಕ್ಷಿತ ಒಲವು. ಇವುಗಳ ಪರಿಧಿಯೊಳಗೆ ಸುತ್ತಿದರೂ, ಬೇಂದ್ರೆಯವರು ಇದೇ ಆವರಣವನ್ನು ಸಮರ್ಥವಾಗಿ ಸುತ್ತಿಕೊಂಡು ಸಾಮಾಜಿಕ ಬದುಕಿನತ್ತಲೂ ದೃಷ್ಟಿ ಹೊರಳಿಸುತ್ತಾರೆ. ಅದು ಸಾರ್ವತ್ರಿಕರಣಗೊಳ್ಳುವ ಸಮಸ್ಯೆ ಹಾಗೂ ಪರಿಹಾರ ಎರಡನ್ನೂ ಬಿಂಬಿಸುತ್ತದೆ.

# ಮಹಿಳಾ ಸಂವೇದನೆ

ಭಾರತೀಯ ನೆಲದಲ್ಲಿ ಮೊದಲು ಮಾತೃ ಪ್ರಧಾನ ವ್ಯವಸ್ಥೆಯಿತ್ತು, ಸ್ತ್ರೀ/ತಾಯಿ ಮಕ್ಕಳನ್ನು ಪಡೆಯುವುದಷ್ಟೇ ಅಲ್ಲದೆ ಅವರನ್ನು ನಮ್ಮ ಸಂಸ್ಕೃತಿಯ ಉತ್ತಮ ಪ್ರಜೆಗಳನ್ನಾಗಿ ರೂಪಿಸುವಲ್ಲಿ ಅವಳ ಪಾತ್ರ ಮಹತ್ತರವಾದುದ್ದು. ಹೀಗೆ ತಾಯಿ/ಸ್ತ್ರೀ ಈ ನೆಲದ ಸಂಸ್ಕೃತಿ ಮತ್ತು ನಾಗರೀಕತೆಗೆ ತವರಾಗಿದ್ದಾಳೆ. ಈ ಜಗದ ಪೂರ್ಣ ಸತ್ಯವನ್ನು ತಿಳಿಯಲು ಪ್ರಯತ್ನಿಸುವ ಗಂಡಸು ವ್ಯಕ್ತಿ ತನ್ನ ಪ್ರಕೃತಿ ಸಹಜ ಇನ್ನೊಂದು ಮುಖವಾದ ಹೆಣ್ಣನ್ನು ತಿಳಿಯಬೇಕು. ಹಾಗೆ ಪ್ರಯತ್ನಿಸದಿದ್ದರೆ ತನ್ನನ್ನು ಸಂಪದ್ಭರಿತಗೊಳಿಸುವ ಪುನರ್ನವೀಕರಿಸುವ ಮೂಲ ಚೇತನದಿಂದ ವಂಚಿತನಾಗುತ್ತಾನೆ[೧] ಎಂದು ಪ್ಲೋರಿಡಾ ಸ್ಕಾಟ್ ಮ್ಯಾಕ್ಸ್‌ವೆಲ್ ಅವರು ತಿಳಿಸಿದ್ದಾರೆ.

## ಬೇಂದ್ರೆ ಕಾವ್ಯದಲ್ಲಿ ಸ್ತ್ರೀ

ಬೇಂದ್ರೆಯವರಿಗೆ ಹೆಣ್ಣು ಎಂದರೆ ತಾಯಿ ಅವರು ತಾಯಿಯ ವಿವಿಧ ರೂಪವೇ ಹೆಣ್ಣಾಗಿ ಅಕ್ಕ, ತಂಗಿ, ಹೆಂಡತಿ, ಮಗಳು ಹಾಗೂ ಇತರ ಸ್ತ್ರೀಯರಾಗಿರುವುದನ್ನು ತಿಳಿಯುತ್ತಾ ತನ್ನ ಬದುಕಿನ ಶೋಧಕ್ಕೆ ತೊಡಗಿದ್ದಾರೆ ತನ್ನ ಬದುಕಿನ ಶೋಧದಿಂದ ಸಂಸ್ಕೃತಿ, ಸಮಾಜ ಕಾವ್ಯ ಶೋಧದ ಸೂಕ್ಷ್ಮವಲಯವನ್ನು ಪ್ರವೇಶಿಸಿ ದೇಶ ಕಾಲಾತೀತವಾದ ಸಾರ್ವತ್ರಿಕ ಸತ್ಯವನ್ನು ತಮ್ಮ ಕಾವ್ಯದಲ್ಲಿನೀಡಿದ್ದಾರೆ ಬೇಂದ್ರೆಯವರು ನನ್ನ ಭಾವನೆಯಲ್ಲಿ ಸ್ಫೂರ್ತಿಯ ಸೆಲೆ ತಾಯಿ[೨] ಎಂದಿದ್ದಾರೆ.

ಬೇಂದ್ರೆಯವರ ಮೊದಲ ಪ್ರಕಟವಾದ ಕೃಷ್ಣಕುಮಾರಿ ೧೯೨೨ ಒಂದು ಖಂಡ ಕಾವ್ಯವಾಗಿದೆ. ಅದರಲ್ಲಿ ಅವರು ಪ್ರೇಮದೇವತೆಯನ್ನು ಪುರುಷ ಪ್ರಧಾನ ಸಮಾಜ ಬಲಿತೆಗೆದುಕೊಂಡ ಒಂದು ದಾರುಣ ಚಿತ್ರವನ್ನು ನೀಡಿದ್ದಾರೆ. ಈ ಚಿತ್ರಣ ಅವರಿಗೆ ಸ್ತ್ರೀಯ ಬಗೆಗಿದ್ದ ಒಲವಿನ ದ್ಯೋತಕವಾಗಿದೆ. ನಂತರದ ಗರಿ ಕವನ ಸಂಕಲನದಲ್ಲಿ ಅವರ ಚಿಂತನೆಯ ಹಲವು ಮುಖಗಳು ಕಾವ್ಯವಾಗಿ ಪ್ರಕಾಶವಾದುದ್ದು ಕಂಡು ಬರುತ್ತದೆ. ಅದರಲ್ಲಿ ಗಂಡಸು ಹೆಂಗಸಿಗೆ ಎಂಬ ಕವನದಲ್ಲಿ ಇಡೀ ಸ್ತ್ರೀ ಸಮೂಹವನ್ನು ತಾಯೆ ಎಂದು ಕರೆದಿದ್ದಾರೆ.

'ತಾಯೆ ಕವಿಮನೆಯೇ ನೀ ಅಕ್ಕ ಅಕ್ಕರತೆಯೇ
ಬಾಯೆನ್ನ ತಂಗಿ ಬಾ ಮುದ್ದು ಬಂಗಾರವೇ
ನೀಯೆನ್ನ ಹೆಂಡತಿಯೊ ಮೈಗೊಂಡ ನನ್ನಿಯೊ
ಮಗಳೊ ನನ್ನೆದೆಯ ಮುಗುಳೊ ?
ಈಯೆನ್ನ ಇರವಿಂಗೆ ಜೀವನದ ಬಾಳ್ವಿಕೆಗೆ
ಈಯುಕ್ತ ಕೈ ಮೈಗಳಂ ಜೀವ ಭಾವದಿಂ
ಸ್ತೀಯೆ ಕಾಪಾಡಿದೌ ಪಾಡಾಗಿ ಮೂಢನನು
ತಕ್ಕೈಸಿ ನೂರು ತೆರದಿ

(ತಾಯೆ ಕವಿ ಮನೆಯೇ ನೀ)



೧. ದ.ರಾ. ಬೇಂದ್ರೆ ಮತ್ತೆ ಬಂತು ಶ್ರಾವಣ ಸಮಾಜ ಪುಸ್ತಕಾಲಯ ಧಾರವಾಡ ಪುಟ ೪೩
೨. ದ.ರಾ. ಬೇಂದ್ರೆ ಸಾಹಿತ್ಯ ವಿರಾಟ್ ಸ್ವರೂಪ ಪೂರ್ವೋಕ್ತ ಪುಟ ೧೦೭

ಎಂದು ಹೇಳಿರುವ ಈ ಚಿಂತನೆಯಲ್ಲಿ ವ್ಯಕ್ತಿಯಾಗಿ ತನ್ನೆಲ್ಲಾ ಪುರುಷ ಪ್ರಧಾನ ಭಾವನೆಗಳನ್ನು ಬದಿಗೊತ್ತಿ ಸ್ತ್ರೀ ಶಕ್ತಿಯನ್ನು ಅರಿತು ಅಲ್ಲಿ ನೆಲಸಿರುವ ಕೊಮಲಾಂತಃಕರಣ ಮತ್ತು ಜೀವಪೋಷಕ ಸತ್ವದಿಂದ ತಾನು ಪೂರ್ಣನಾಗಲು ಪ್ರಯತ್ನಿಸಿರುವುದು ಕಂಡು ಬರುತ್ತದೆ. ಮಿಂಚಿನ ಹೊಳಪಿನ ಸೃಷ್ಟಿ ಹಾಗೂ ಜ್ಞಾನದ ನೆಲೆ ತಾಯಿ ಎಂದು ತಿಳಿದು ತಾಯೆ ಕವಿ ಮನೆಯೇ ನೀ ಎಂದಿದ್ದಾರೆ. ಅವರಿಗೆ ತಾಯಿ ಎಂದರೆ ಬೆಳಕು ಮತ್ತು ಜ್ಞಾನ ಪ್ರೀತಿಯನ್ನು ಸದಾ ಹೊಂದಿರುವ, ಅಕ್ಕನು ಅಕ್ಕರತೆಯ ಪ್ರತಿಮೂರ್ತಿ ಪ್ರೀತಿಯ ತಂಗಿ, ಮುದ್ದು ಬಂಗಾರ ವ್ಯಕ್ತಿ ಬೆಳೆದು ಯೌವನಸ್ಥನಾದಂತೆ ಹೆಣ್ಣನ್ನು ಹೆಂಡತಿಯಾಗಿ ಕಾಣುತ್ತಾನೆ, ಆ ಹೆಂಡತಿ ಎಂಬುವವಳು ಸತ್ಯ, ಪ್ರೀತಿ, ವಿಶ್ವಾಸವನ್ನೇ ಮೈಗೊಂಡವಳು ಅವರ ಪ್ರೀತಿಯ ಫಲ ಮಗಳು.

ಹೀಗೆ ಈ ಮಾತೃಪ್ರಜ್ಞೆಯೇ ಬೇಂದ್ರೆ ಕಾವ್ಯದ ಸ್ಥಾಯಿಭಾವ ಸಂಸ್ಕೃತಿಯನ್ನು ರೂಪಿಸಿದ ತಾಯಿ ಶಕ್ತಿಯ ಮುಂದಿನ ರೂಪವೇ ಗೃಹಿಣಿ. ಸ್ತ್ರೀಯ ಬಗ್ಗೆ. ಈ ರೀತಿಯ ಉನ್ನತ ಭಾವವಿದ್ದರಿಂದಲೇ ಅವರು ಸ್ತ್ರೀಯನ್ನು ಪುರುಷನಿಗಿಂತ ಉತ್ತಮಳೆಂದು ಚಿತ್ರಿಸಲು ಸಾಧ್ಯವಾಯಿತು ಈ ಗೃಹಿಣಿ ಎಂಬ ಕವನದಲ್ಲಿ ಸ್ತ್ರೀ ತಾಯಿಯಾದ ಕಾರಣ

ಏಳು ಮೆಟ್ಟಿನ ಹುಲಿಯ ಬೀರ ಬೇಂಟೆಯ ಬಿಡಿಸಿ
ಮಗುವ ಮದ್ದಾಡವೊಲು ಮಾಡಿದಾಕೆ

ಆಗಿದ್ದಾಳೆ ಮೃಗ ಸ್ವರೂಪಿಯಾದವನು ಮಾನವನಾಗುತ್ತ ಮಗುವನ್ನು ಮುದ್ದಾಡಿ ಪ್ರೀತಿ ಸಹನೆ ಶಾಂತಿಯನ್ನು ಪಡೆದಾಗ ಅವನು ಗುರಿಯಿಟ್ಟ ಕಣ್ಣಿನವನಾಗಿ ಬೇಟೆಯನ್ನು ಬಿಟ್ಟು ಒಂದೆಡೆ ನಿಂತಾಗ ಅವಳು ತಳಿರಿನುಡುಗೆಯನ್ನುಟ್ಟು ಗರಿತೊಡವುಗಳ ತೊಟ್ಟು ಸೌಂದರ್ಯವನ್ನು ಸೃಷ್ಟಿಸಿಕೊಳ್ಳುತ್ತ ಕಾಡಿನಲ್ಲಿ ಸಂಸ್ಕೃತಿಯು ಮೊದಲಾಗಲು ಕಾರಣಳಾಗಿದ್ದಾಳೆ. ಈ ಎಲ್ಲಾ ಕಾರಣದಿಂದ ಬೇಂದ್ರೆಯವರು ಗೃಹಿಣಿಯನ್ನು ಅಡವಿಯಲ್ಲಿ ಹೂದೋಟ ಹೂಡಿದಾಕೆ ಎಂದಿದ್ದಾರೆ.

ಅರಣ್ಯದ ಪಶು ಪ್ರವೃತ್ತಿಯಿಂದ ಇಡೀ ಮಾನವ ಕುಲವನ್ನು ಪ್ರತ್ಯೇಕವಾಗಿಸಿ ಗೃಹಿಣಿಯಾದ ಹೆಣ್ಣಿಗೆ ಮಕ್ಕಳೆ ಸರ್ವಸ್ವವಾಗಿದ್ದಾರೆ. ಅವಳು ತನ್ನ ಸಂತತಿಯ ಉಳುವಿಗಾಗಿ ಪಶು ಪ್ರಾಣಿಗಳೊಡನೆ ಹೋರಾಡಿ ಪ್ರಕೃತಿ ವಿಕೋಪಕಂಡು ಅದರಿಂದಲೂ ತನ್ನನ್ನು ತನ್ನವರನ್ನು ರಕ್ಷಿಸಿಕೊಳ್ಳಲು ಪ್ರಕೃತಿಯನ್ನು ಪ್ರಾರ್ಥಿಸಿದ್ದಾಳೆ. ಹೀಗೆ ಪಂಚಭೂತಗಳ ಆರಾಧನೆಯನ್ನು ಪ್ರಾರಂಭಿಸಿದಳು ಹೆಣ್ಣು ಎಂದು ಬೇಂದ್ರೆಯವರು ಬೇರೊಂದು ಲೋಕವನ್ನು ಮೂಕ ಮಾತುಗಳಿಂದ ಬೇಡಿದಾಕೆ ಎಂದಿದ್ದಾರೆ. ಇವಳು ಮಂಗಲವನ್ನು ಜಯವನ್ನು ತರುವಾಕೆ ಎಂದಿದ್ದಾರೆ.

'ಮನೆಯ ಹೊಸ್ತಿಲಕೆ ಶುಭ ಬರೆಯುವಾಕೆ
ಮಂಗಲವ ಬಾಯೆಂದು ಕರೆಯುವಾಕೆ
ಬಾಳ ಸುಳಿಯಲಿ ಬೆಳೆಯ ತೋರುವಾಕೆ
ದಿನದಿನವು ನವಜಯವ ಬರೆಯುವಾಕೆ'

ಬೇಂದ್ರೆಯವರು ನೀಡಿರುವ ಕವನಗಳ ಭಾವ ಸಂದರ್ಭಗಳಿಂದ ಗಮನಿಸಬೇಕಾದ ಮತ್ತೊಂದು ಕವನ 'ದೀಪ'. ಈ ಕವನದಲ್ಲಿ ದೀಪ ದಂಪತಿಗಳ ಜೀವನದ ಬೆಳಕಿಗೆ ಸಂಕೇತವಾಗಿದೆ. ಅದನ್ನು ಅವರು ಹಿಡಿದು ನದಿಯಲ್ಲಿ ಬಿಡುವುದಲ್ಲಿ ಆ ಬೆಳಕನ್ನು ಬೆಳಗುವುದರಲ್ಲಿ ತಾವು ಬೆಳಕಾಗಬೇಕು ಎಂಬ ಚಿಂತನೆಯಿದೆ. ದೀಪದ ಜೊತೆಗೆ ಅವರು ತಮ್ಮ ವೈಯುಕ್ತಿಕತೆಯನ್ನು ತೇಲಿ ಬಿಡುತ್ತ ಅದು ಲೋಕದ ಬೆಳಕಾಗುವುದನ್ನು ತಾವು ಸಮಾಜಮುಖಿಗಳಾಗಬೇಕು ಎಂಬ ಸಂಕೇತವನ್ನು ಈ ಕವನ ಸಾರುತ್ತದೆ. ಹೀಗೆ ವ್ಯಕ್ತಿ ಸಮಷ್ಟಿಯಲ್ಲಿ ಬೆರೆತು ವಿಶ್ವ ಚಿಂತನೆಯನ್ನು ರೂಢಿಸಿಕೊಳ್ಳುವುದನ್ನು ಸಂಕೇತ ಸುತ್ತ ದಂಪತಿಗಳಾದ ಗಂಡು ಹೆಣ್ಣು ಲೋಕ ಕಲ್ಯಾಣದ ಜಗದ ಬೆಳಕಿನ ಆನಂದದಲ್ಲಿ ತಲ್ಲೀನರಾಗುವುದನ್ನು ದರ್ಶಿಸುತ್ತದೆ.

ಬೇಂದ್ರೆಯವರ ಕಾವ್ಯದಲ್ಲಿ ಹೆಣ್ಣನ್ನು ಸಖಿಎಂದು ಜೀವನ ಜೊತೆಗಾತಿಯಾದ ಹೆಂಡತಿಯನ್ನು ಸ್ನೇಹ ಭಾವದಿಂದ ನೋಡಿರುವ ದೃಷ್ಟಿಯುಳ್ಳ ಮತ್ತೊಂದು ಕವನ 'ಫಜಾರ ಗಟ್ಟಿ ಮುಟ್ಟೋಣಬಾ' ಕವನದಲ್ಲಿ ಸಂಸಾರದಲ್ಲಿ ಸತ್ಯದ ನೆಲೆಯ ಶೋಧವಾಗಿ ದಾಂಪತ್ಯದ ಆಟದಲ್ಲಿ ಒಲವಿನ ನೆಲೆಯ ಗುರಿಯನ್ನು ಮುಟ್ಟುವ ಸಾಧನೆಗಾಗಿ ಸಖಿಯನ್ನು ಹೀಗೆ ಆಹ್ವಾನಿಸುತ್ತಿದ್ದಾರೆ. ಬೇಂದ್ರೆಯವರ ಅಂತರಾತ್ಮಕ್ಕೆ ಈ ಸತ್ಯಗೋಚರಿಸುತ್ತಿದೆ ಅದನ್ನು ತಾನೋಬ್ಬನೆ ಮುಟ್ಟಲು ಸಾಧ್ಯವಿಲ್ಲ ಅದಕ್ಕಾಗಿ ಗಿಣಿ ಗೆಳೆತನದ ದಂಪತಿಗಳು ಒಂದೇ ಮನದಲ್ಲಿ ಸತ್ಯ ಪ್ರೀತಿಯಿಂದ ಅದನ್ನು ಹುಡುಕಬೇಕು ಅದು ಐಹಿಕವಾದುದು ಆದಕಾರಣ ಸಖಿಯನ್ನು ಕರೆದು ಹೇಳುತ್ತಾರೆ

ಅಂಗ ಲಿಂಗದ ಜೋಡಿ ಕೂಡಿಹೊಸ
ಗಿಣಿ ಗೆಳೆತನ ನೋಡೋಣಬಾ
ಮನಾಎಂಬೊ ಹೊಸಾಬನ ತೆರೆದರ
ಜನ ಕಂಡು ಅದ ಕೂಡೋಣಬಾ
ಎಂದು ಹೇಳಿ ಮುಂದುವರಿದು
ನೇಲಿಮ್ಯಾಲ ನೆಲಅಲ್ಲ ಸಂಗಿ ಅದು
ಅದ್ಯ ನಿಜದ ನೆಲೆ ಮುಟ್ಟೋಣಬಾ

ಅಂದರೆ ಅದು ಇಲ್ಲಿಯೇ ನಮಗೆ ಸಿಕ್ಕಿತು ಎಂಬಂತೆ ಕೈಗೆಟಕುವುದಿಲ್ಲ. ಅದನ್ನು ಇಬ್ಬರು ಜೊತೆಗೂಡಿ ಪಡೆಯಬೇಕು ಎಂದು ಸಂಗೀ (ಜೊತೆಯಾಕೆ) ಎನ್ನುವ ಪದವನ್ನು ಬಳಸಿದ್ದಾರೆ ಎಂಬುದು ಗಮನರ್ಹವಾದುದು. ಈ ಪದ ದಾಂಪತ್ಯ ಸಾಧನೆಯ ಒಲವಿನ ಆತ್ಮಿಯತೆಯ ಜೊತೆಯಾದ ಒಂದೇ ಆದ ಭಾವವನ್ನು ಧ್ವನಿಸುತ ಅವಳನ್ನು ಆಪ್ತವಾಗಿಸಿಕಂಡು ಅದ್ಯ 'ನಿಜದನೆಲ' ಎಂದು ಹೃದಯಕ್ಕೆ ಹತ್ತಿರವಾಗಿಸಿಕೊಂಡು ಆ ನಿಜದ ನೆಲೆಯಲ್ಲಿ ಶಾಶ್ವತ ಪ್ರೀತಿಯನ್ನು ಮುಟ್ಟೋಣಬಾ ಎಂಬ ದರ್ಶನವಿದೆ,

ಸಖ ಸಖಿಯರ ಬಂಧವು ಶಾಶ್ವತ ಒಲವನ್ನು ಕಾಣುತ್ತ ದೇವಕಾಮನನ್ನು ಕಾಮದೇವ (ಮಗು) ವಾಗಿ ಪಡೆಯುತ್ತ ತಮ್ಮ ವೈಯುಕ್ತಿಕ ಮಿತಿಯನ್ನು ಮೀರಿ ಜಗದ ಆನಂದಕ್ಕೆ ಜೊತೆಯಾಗಿ ಸಾಗುತ್ತ ಬೆಂದವರ ಜೀವ ಬೆರಸೋಣಬಾ ಎಂದು ನುಡಿದು ಲೋಕ ಕಲ್ಯಾಣದ ಸಾರ್ವಕಾಲಿಕ ಚಿಂತನೆಯನ್ನು ಮಾಡಿದ್ದಾರೆ ಅದನ್ನು ಸಾಧಿಸಲು ಅವರು ಗುರು ಮತ್ತು ತಾಯಿಯನ್ನು ಅವಲಂಬಿಸಿ

ಇರುವು ಅರಿವಿನ ಹರವೆ ನಮ್ಮ ಕುರು
ವಾಗಿ ತಾಯಿಯಾಗಿ
ಮೂರನೊಂದರಲಿ ಪಿಂಡಗೊಳಿಸುವಾ
ಗುರುವೇ ಬಾಯಿಯಾಗಿ
ಸೀಮವನ್ನು ನಿಸ್ಸೀಮದೊಡನೆ ಹುದು
ಗೊಳಿಸಿ ಮಾಯಿಯಾಗಿ
ಜೀವ ಪುಷ್ಪದೊಳೆ ಫಲಿಸೆ ಪಕ್ವತೆಗೆ
ಬರಲಿ ಕಾಯಿಯಾಗಿ

ಎಂದು ತನ್ನ ಅರಿವನ್ನು ವಿಸ್ತರಿಸಿ ಪಕ್ವಗೊಳಿಸಿ ಪ್ರಾರ್ಥಿಸುತ್ತ ಸಮರಸ ತತ್ವದ ಸಾಧನೆಯತ್ತ ಸಾಗಿರುವುದನ್ನು 'ಸಖಿಗೀತ'ದಲ್ಲಿ ಕಾಣುತ್ತೇವೆ.



**ಸಖೀ ಗೀತ**



ಬೇಂದ್ರೆಯವರು ತನ್ನ ಪತ್ನಿಯನ್ನು ಸಖಿಯೆಂದು ಕರೆದು ಈ ಸಖಿ ಸಖ ಭಾವ ದಂಪತಿಗಳ ಸ್ನೇಹ ಭಾವವನ್ನು ಸುಖ ದುಃಖವನ್ನು ಸಮನಾಗಿ ಹಂಚಿಕೊಂಡು ಜೀವನವನ್ನು ನಡೆಸುವ ಜೀವಮನೋಲ್ಲಾಸವನ್ನು ಪ್ರತಿ ಬಿಂಬಿಸುತ್ತವೆ ಬೇಂದ್ರೆಯವರು ಹೆಣ್ಣಿನ ಮೃದು ಭಾವವನ್ನು ಮತ್ತು ಆಕೆಗೆ ಸಮಾಜದಲ್ಲಿ ನೀಡಬೇಕಾದ ಸ್ಥಾನವನ್ನು ಅರಿತವರಾಗಿ ಸಮಾಜಕ್ಕೆ ಆ ಮುಖದ ಸತ್ಯವನ್ನು ದರ್ಶಿಸುತ್ತ ದಂಪತಿಗಳ ಪರ ಅರಿವಿನೊಡನೆ ಸಮಾಜ ವಿಕಾಸವಾಗಬೇಕೆಂದು ಕನಸುಕಂಡವರು ಆದಕಾರಣ ತಮ್ಮ ದಾಂಪತ್ಯದ ನೋವು, ನಲಿವು, ಸ್ನೇಹ, ಪ್ರೇಮ, ಸೋಲು ಗೆಲುವು, ಆತ ಉಲ್ಲಾಸವನ್ನು ಸಖ ಸಖಿ ಭಾವದಿಂದ ಸಖೀ ಗೀತದಲ್ಲಿ ವಿಶ್ಲೇಷಿಸಿದ್ದಾರೆ ವಿಧಿತಂದ ವಧು ವನ್ನು ಸ್ನೇಹಿತಳನ್ನಾಗಿಸಿಕೊಂಡು ಬಾಳುವೆ ಮಾಡಿದ ಆತ್ಮಕಥೆಯನ್ನು ಕಾವ್ಯವಾಗಿ ಚಿತ್ರಿಸಿದರು. ಸಖೀ ಗೀತ ಸೂಕ್ಷ್ಮ ಮನಸಿನ ಮಡದಿಯನ್ನು ತಿಳಿಯಲು ಪ್ರಯತ್ನಿಸುವ ಪ್ರಯತ್ನದಂತೆ ಅದರ ಒಡಲಿನಲ್ಲಿ ಕಾವ್ಯ ದೇವತೆಯ ಉಪಾಸನೆಯಲ್ಲಿ ತೊಡಗಿಕೊಂಡ ಕವಿಯ ಸೃಜನಶೀಲತೆಯನ್ನು ಒಳಗೊಂಡಿದೆ. ಇದು ಈ ಕಾಲಮಾನದ ಸ್ತ್ರೀ ಸಾಮಾನ್ಯರ ಬದುಕಿನ ಕಿರಿದಾದ ಮಹಾಕಾವ್ಯವಾಗಿದೆ.

ಸಖ ಸಖಿಯಾದ ದಂಪತಿಗಳ ಗುಟ್ಟು ಸಂಸಾರದ ಗುಟ್ಟು ಅದೂ ಸಖಿಯ ಬಗ್ಗೆ ಹೇಳಲು ತೊಡಗುವಾಗ ಅವಳ ಅನುಮತಿಯಿಲ್ಲದೆ ಏನನ್ನು ನುಡಿಯಬಾರದು ಈ ಭಾವನೆ ಪತ್ನಿಯನ್ನು ತನ್ನ ಅರ್ಧಾಂಗಿಯಾಗಿ ಕಾಣುವ ಸಮಾನ ತತ್ವದ ಜೀವನಸಾಧನೆಯ ಫಲ ಸ್ವರೂಪಿ ವ್ಯಕ್ತಿ ಮಾತ್ರ ಕಲ್ಪಿಸಲು ಸಾಧ್ಯ ಅದು ಎಲ್ಲ ಕುಟುಂಬದಲ್ಲಿ ಪಸರಿಸಿದರೆ ಅದು ಸಮರಸ ತತ್ವಕ್ಕೆ ನಾಂದಿಯಾಗಿ ಸಮಾಜದಲ್ಲಿ ದೇಶದಲ್ಲಿ ಶಾಂತಿ, ನೆಮ್ಮದಿ ಸುಖ ಸ್ಥಾಪಿತವಾಗಲು ಸಾಧ್ಯ ಸ್ತ್ರೀ ಸಮಾನತೆಯ ಭಾವ ಪತ್ನಿಯಲ್ಲಿ ಮೊದಲು ಮೂಡಬೇಕು ಎಂಬ ನಿಲುವಿನಿಂದ ಬೇಂದ್ರೆಯವರು ಈ ಕಾವ್ಯವನ್ನು ಪ್ರಾರಂಭಿಸುವ ಮೊದಲು ಪ್ರಾಸ್ತಾವಿಕ ಭಾಗದಲ್ಲಿ ಸಖಿಯನ್ನು

ಸಖಿ ನಮ್ಮ ಸಖ್ಯದ ಆಖ್ಯಾನ ಕಟುಮಧುರ
ವಾಖ್ಯಾನ ದೊಡಗೂಡಿ ವಿವರಿಸಲೇ
ಕರುಳಿನ ತೊಡಕನು ಕುಸುರಾಗಿ ಬಿಡಿಸಿಟ್ಟ
ತೊಡವಾಗಿ ತಿರುಗೊಮ್ಮೆ ನಾಧರಿಸಲೇ[1]?

ಎಂದು ಹೇಳುತ್ತಾರೆ.

ವಿವಾಹದ ನಂತರ ಪತಿ ಪತ್ನಿಯರ ಪ್ರಣಯ ಅವರು ಪಟ್ಟ ಸಂತಸ ವರ್ಣಿತವಾಗಿದೆ.

ನೀನು ದೊಡ್ಡವಳಾದೆ ಮೊಸಲಿಗೆ ಬೆಳಸಿದೆ
ಏಕಾಂಕ ಕೆಳೆಲಿದೆ ಎಳೆ ಕೆಳದಿಯ
ಏನು ಸಂಭ್ರಮವದು! ಹರೆಯದ ಹಬ್ಬವು
ಕನಸು ಮನಸೂ ಹೆಣೆದು ಬೆಳೆ ಬೆಳೆದವಳೇ

ಇದರಲ್ಲಿ ಎರಡನೇಯ ಸಾಲು ಅವಳು ಅವನ್ನು ಸೆಳೆದ ರೀತಿ 'ಮಾತಿನೊಂದೊಡಗೂಡಿದ' ಆಕರ್ಷಣೆಯಾಗಿದೆ ಜೊತೆಗೆ ಅವಳು ಎಳೆಯ ಸ್ನೇಹಿತ ಎಂಬುದನ್ನು ಧ್ವನಿಸುತ್ತದೆ.

ನಂತರ ಪತ್ನಿ ಗರ್ಭಿಣಿಯಾಗಿ ಅತ್ತೆಗೆ ಅವಳು ಪ್ರೀಯಳಾಗುತ್ತ ಮನೆಯ ಜ್ಯೋತಿಯನ್ನು ಬೆಳಗಿಸುವವಳಾದಳು ಎನ್ನುವ ಸಂತಸದ ದಿನಗಳಲ್ಲಿಯೇ ಆಸರೆಯಾಗಿದ್ದ ತಾಯಿಯ ಸಾವು ನೋವುಂಟಗುತ್ತದೆ ಅದನ್ನು ಕವಿ

'ಕನಸಿಗು ಹೊಳೆಯದ ಬರ ಸಿಡಿಲೆರಗಿತು
ತಾಯಿ ಗಿಡವು ಮಾಯವಾಯಿತೆಲೇ'

ಎಂದಿದ್ದಾರೆ.

ಇದು ಅವರ ತಾಯಿಯ ಬಗೆಗಿನ ಅಪಾರ ಒಲವನ್ನು ಚಿತ್ರಿಸಿದ್ದಾರೆ ಅವರೇ ಹೇಳಿಕೊಂಡಿರುವ ಒಂದು ಮಾತು ಗಮನಾರ್ಹ ನನ್ನ ತಾಯಿಯ ಮರಣ ನಂತರ ತಾನು ಪ್ರೌಢನಾದೆ ಅಲ್ಲಿಂದೀಚೆಗೆ ಅವರು ತಾಯಿಯ ಪ್ರೀತಿಯ ಮಮತೆಯನ್ನು ಸಖಿಯಲ್ಲಿ ಕಾಣಲು ತೊಡಗುತ್ತಾರೆ. ಮಡದಿಯಲ್ಲಿ ತಾಯಿತನದ ಸಾತ್ವಿಕತೆಯನ್ನು ಕಾಣುತ್ತಾರೆ.ಆಕೆಯನ್ನು ಕೂಸಿನ ಹೊಸತಾಯಿ ಎಂದು ಕರೆದು ಅವರು ಅವಳ ಕಂಡ ತಾಯಿಯನ್ನು ಕಾವ್ಯದಲ್ಲಿ ಪರಿಚಯಿಸುತ್ತಾರೆ.

ದಾಂಪತ್ಯ ಎಂಬುದು ಒಂದು ಸಾಧನೆ. ಸಾಧನೆ ವಿರಸದ ಜೀವನವನ್ನು ಮತ್ತೆ ರಸಮಯವಾಗಿಸುವ ಪ್ರಯತ್ತದ ಮನಸ್ಥಿತಿ ಹಾಗಾಗಿ ತೆರೆದ ಮನಸ್ಸಿನಿಂದ ಸಖಿಯನ್ನು ಮಾತಾಡಿಸಿ ತನ್ನ ತಪ್ಪನ್ನು ತಿದ್ದಿಕೊಳ್ಳುತ್ತ ಸಾಗಿದ ಸಖನನ್ನು ಇಲ್ಲಿ ಬಾಳಲುಬೇಕಾದ ಮುಕ್ತ ಮಾತಿದೆ. ಅದು ಕಾವ್ಯದಲ್ಲಿ ಮೂಡಿರುವ ರೀತಿ ಹೀಗಿದೆ ಸಖಿ ನುಡಿಯುತ್ತಾಳೆ.



೧. ಸಖೀಗೀತ ೧೯೩೨ ಪುಟ ೧

ನಿಮಗೇನು ರಮ್ಯತೆ ರಸಿಕತೆ ಕರೆಯುವ
ನೂರು ಹಾದಿಯಲ್ಲೊಂದು ಅದು ಹಾದಿಯು
ನಮಗೆ ಜೀವನದಾಟ ಪಾಟದ ನೋಟದ
ಬೇಟದ ಕೂಟದ ಸುಸಮಾಧಿಯು

ಅದಕ್ಕೆ ಉತ್ತರ ವೆಂಬಂತೆ ಕವಿ ನುಡಿಯುತ್ತಾರೆ

ಜೀವನಿಗಾಧಾರ ಜೀವನಾಮೃತಧಾರೆ
ಪ್ರೀತಿ ಜೀವನದೊಳಾರೆ ಜೀವನವೇ

'ನಿಮ್ಮ ಜೀವನ ಧ್ಯೇಯ ಗೌರಿಶಿಖರದಂತೆ
ಶಿಖರವನೆತ್ತಿದ ಮುಗಿಲಿ ನೆಡೆ
ನನ್ನೆದೆ ತಿರುಗಿದೆ ಗಂಗೆಯು ಹರಿದಂತೆ
ಜನ ರೀತಿಯಂತೆ ನೆಲದ ಕಡೆ

(ಸಖೀ ಗೀತ)

ಎಂದು ಕವಿ ಪತ್ನಿ ನುಡಿಯುವಲ್ಲಿ ಅವರಲ್ಲಿರುವ ವೈಚಾರಿಕ ಭಿನ್ನತೆ ಸ್ಪಷ್ಟವಾಗುತ್ತದೆ. ಅವಳು ಕವಿಯ ಆದರ್ಶ ಜೀವನ ಧ್ಯೇಯ.ಅತಿ ಎತ್ತರವಾದದು ಎಂದು ಹೇಳುತ್ತಲೆ ತಾನು ಜನರೀತಿಯಂತೆ ಈ ನೆಲದ ಬದುಕಿನೆಡೆಗೆ ಒಲಿದವಳು ಎಂದು ಹೇಳುತ್ತಾಳೆ. ಅದೇ ವಾದವನ್ನು ಮುಂದುವರೆಸಿ ಇನ್ನೂ ಸ್ಪಷ್ಟವಾಗಿ ಆದರ್ಶದ ಕಲ್ಪನೆಯ ಗುಂಪಿಗೂ ಈ ನೆಲಕ್ಕಂಟಿದ ಜೀವನಕ್ಕೂ ಇರುವ ವ್ಯತ್ಯಾಸವನ್ನು ಹೇಳುತ್ತಾಳೆ. ಹಾಗೆ ನುಡಿದು ಅವನ ಅದರ್ಶವನ್ನು ಅದರಿಂದಾಗುವ ಅವನ ಆನಂದವನ್ನು ತಾನು ಕಂಡಿರುವುದಾಗಿ ಹೇಳುವ ಆಕೆಯು ಪ್ರಜ್ಞಾವಂತ ಗೃಹಿಣಿಯಾಗಿ ಕಂಗೊಳಿಸುತ್ತಾಳೆ.

ಗೆಳೆಯರ ಕೂಡಾಡಿ ಬಂದಾಗ ನಾ ನಿಮ್ಮ
ಮುಖದಲುಕ್ಕುವ ಗೆಲುವ ಕಂಡಿಲ್ಲವೆ !
ಮನೆ ಬೆಳಕು ಮುಂದಿರೆ ಆ ಕಣ್ಣು ಕುಂದಿರೆ
ನಾನೊಳಗೆ ನೊಂದಿರೆ ನೀನರಿಯರೆ ?

ಹೀಗೆ ಜೀವಸಂವಾದ ಸಖ ಸಖಿಯರಲ್ಲಿ ಉಂಟಾಗಿ ಅವರು ವಿರಸದ ಕಾರಣವನ್ನು ಅರಿಯುತ್ತಾರೆ ಆತನಿಗೆ ತನ್ನ ತಪ್ಪಿನ ಅರಿವಾದರೂ ಅದನ್ನು ಸ್ಪಷ್ಟವಾಗಿ ಹೆಂಡತಿಗೆ ಹೇಳದಿದ್ದರೂ ಆತ್ಮ ಶೋಧಕ್ಕೆ ತೊಡಗಿಕೊಳ್ಳುತ್ತಾನೆ. ತನ್ನನ್ನು ಸಲುಹಿದ ತಾಯಿಯಂತೆ ಪತ್ನಿಯು ಮಕ್ಕಳಿಗೆ ತಾಯಿಯಾಗಿ ಸಲುಹುತಿರುವುದು ಅವನ ಪ್ರಜ್ಞೆಯನ್ನು ಎಚ್ಚರಿಸುತ್ತದೆ.

'ನನ್ನ ತಾಯಿಯ ನೆನೆದು ನಾ ಸಮ್ಮನಾದೆನು
ಒಳಗೊಂದು ಹೊರಗೊಂದು ಜೀವಿಸಿದ'

ಎಂಬ ಒಳಮನದ ನಿಜ ಸ್ಪರ್ಶದಲ್ಲಿ 'ಗಾಳಿಗಿಂತ ತೆಳ್ಳಗಿತ್ತೇ' ಎಂಬ ನಿರಾಳ ಮನದವನಾಗುತ್ತಾನೆ. ಈ ಭಾವ ಬಂದಾಗ ಸಮರಸತತ್ವ ಮಾಡಿದಂತೆ ಅದು ಬಂದ ಕಾರಣ ಕವಿಯು ಸಖ-ಸಖಿ ಬಾಂಧವ್ಯವನ್ನು ಕುರಿತು ಸಾರ್ವಕಾಲಿಕವಾದ ಸತ್ಯವನ್ನು ನುಡಿಯುತ್ತಾನೆ.

ಅನ್ನಕೆ ಬಾಳಾಗಿ ಕಾಮಕೆ ಹೋಳಾಗಿ
ಮಾನಕೆ ಆಳಾಗಿ ಉಸುರೆಳೆದುದು
ಬಾಳಲ್ಲ ಬದುಕಲ್ಲ ಜೀವ ಜೀವ ಉ
ದ್ದೀಪನವಾದುದೆ ಜೀವನವು

(ಸಖೀ ಗೀತ)

ಕವಿ ತನ್ನ ದಾಂಪತ್ಯದ ಅಂತರ್ಯವನ್ನು ಹೀಗೆ ಬಹಿರಂಗಗೊಳಿಸಿದ ಹಾಡಾಗಿ ಈ ಕಾವ್ಯದ ಕೊನೆಯ ಭಾಗದ ಹೊತ್ತಿಗೆ ಕವಿ ತನ್ನ ಯಜಮಾನ ಸಂಸ್ಕೃತಿಯಿಂದ ಪುರುಷ ಪ್ರಧಾನ ಪ್ರಜ್ಞೆಯಿಂದ ಸಡಿಲಗೊಂಡಿದ್ದಾನೆ. ಅವನಲ್ಲಿ ದಾಂಪತ್ಯ ಆನಂದಕ್ಕೆ ಸಖ ಸಖಿಯರಲ್ಲಿ ಹೊಂದಾಣಿಕೆ ಸರಿ ಸಮನಾಗಿರಬೇಕೆಂಬ ತಿಳಿವು ಬಂದಿದೆ ಅದನ್ನು ಮುಕ್ತವಾಗಿ ಹೇಳಿಕೊಂಡಿರುವುದು ಈ ಕಾವ್ಯದ ಆ ಕಾಲಮಾನ ಹೆಮ್ಮೆಯ ವಿಷಯವಾಗಿ ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಮಾನತೆಯನ್ನು ಸಾರಿದ ಅದ್ಯ ಕಾವ್ಯವಾಗಲು ಕಾರಣವಾಗಿದೆ.

ಕವಿಯು

ಅಂಬಿಕಾತನಯನ ಜಂಭದ ಪಾಡಳಿದು
ನಂಬಿಕೆಯ ಹಾಡಾಗಿ ಬಂತಿಲ್ಲಿಗೆ
ಪೂರ್ಣಾನುರಾಗವೀ ಪರ್ವಕ್ಕೆ ಸಂದಿತು
ಉತ್ತರೋತ್ತರವಿರಲಿ ಉತ್ತರೆ

'(ಸಖೀ ಗೀತ)

ಎಂದು ಹೇಳಿದ್ದಾರೆ.

ಇದು ಸಖ ಸಖಿಯರ ಹಾಡು ಅದು ನಿರಂತವಾಗಿ ಸಾಗುತಿರುತ್ತದೆ. ಅದಕ್ಕೆ ಅಂತ್ಯವಿಲ್ಲವೆಂಬುದನ್ನು

ನನಗೂ ನಿನಗೂ ಅಂಟಿದ ನಂಟಿನ
ಕೊನೆ ಬಲ್ಲವರಾರು ಕಾಮಾಕ್ಷಿಯೆ!

ಎಂಬ ಪಲ್ಲವಿ ಧ್ವನಿಸುತ್ತದೆ. ಬೇಂದ್ರೆಯವರು ಈ ಕಾವ್ಯದಲ್ಲಿ ಸಖಿ ಎಂಬುವಳು ಹೆಣ್ಣು ಮಾತ್ರವಾದ ಜೊತೆಗಾತಿಯಲ್ಲಿ ಅವಳು ಬೌದ್ಧಿಕ ಮತ್ತು ಆಧ್ಯಾತ್ಮಿಕ ಜೊತೆಗಾತಿ ಎಂಬುವನ್ನು ಶೋಧಿಸಿದ್ದಾರೆ.

## ಕೆ.ಎಸ್. ನರಸಿಂಹಸ್ವಾಮಿಯವರ ಕಾವ್ಯದಲ್ಲಿ ಸ್ತ್ರೀ

ಕೆ.ಎಸ್. ನರಸಿಂಹಸ್ವಾಮಿಯವರ ಮೊದಲ ಸಂಕಲನವಾದ 'ಮೈಸೂರು ಮಲ್ಲಿಗೆ'ಯಿಂದ ಹಿಡಿದು ಐರಾವತ ದೀಪದ ಮಲ್ಲಿ ಉಂಗುರ ಮುತಾಂದ ಕವನ ಸಂಕಲನಗಳ ತನಕವೂ ದಾಂಪತ್ಯ ಜೀವನ ಪ್ರಧಾನವಾದ ಸುಕುಮಾರ ಭಾವನೆಯ ಅಭಿವ್ಯಕ್ತಿಯ ಕವನಗಳು ಕಂಡುಬರುತ್ತದೆ. ನವ ದಾಂಪತ್ಯ ಪ್ರಣಯದ ಗಂಡು ಹೆಣ್ಣು ಇವರ ಕಾವ್ಯದಲ್ಲಿನ ನಾಯಕ ನಾಯಕಿಯ ಇವರು ಸೃಷ್ಟಿಸಿರುವುದು ಒಂದು ಭಾವನ್ಮಾಕ ಲೋಕ ಈ ಲೋಕದಲ್ಲಿರುವ ತವರು, ಗಂಡನ ಮನೆ, ಮಕ್ಕಳು, ಅತ್ತೆ ಮಾವ, ನಾದಿನಿ, ಬಳೆಗಾರ ಮುಂತಾದ ಪಾತ್ರಗಳೇ ಪ್ರಾಸಂಗೀಕವಾಗಿ ಪ್ರಧಾನ ವಸ್ತುಗಳು. ಇಲ್ಲಿ ಹೆಂಡತಿಗೆ ಪದ್ಮ, ಗೌರಿ, ಹೆಸರುಗಳಿವೆ ಗಂಡನಿಗೆ ಯಾವ ಹೆಸರಿನ ಉಲ್ಲೇಖವೂ ಇಲ್ಲ ಹೆಚ್ಚೆಂದರೆ 'ರಾಯರು' ಎಂಬ ಸಂಭೋದನೆ ಮಾತ್ರ ಗಂಡನ ದೃಷ್ಟಿಯಲ್ಲಿ ಹೆಂಡತಿಯನ್ನು ನೋಡಿ ಬರೆದ ಕವನಗಳೇ ಹೆಚ್ಚು ಹೆಂಡತಿ ಗಂಡನನ್ನು ಕುರಿತು ಹೇಳಿದ ಕವನಗಳ ಸಂಖ್ಯೆ ಕಡಿಮೆ ಸುಖ ಸಂಸಾರದ ಕಲ್ಪನೆಯೇ ಎಲ್ಲಾ ಕವಿಗಳ ಮೂಲ ಉದ್ದೇಶ.

ಜೀವನದ ಸಾಫಲ್ಯ ದಾಂಪತ್ಯದ ಸಾಫಲ್ಯದಲ್ಲಿಯೇ ಇದೆ ಎಂಬುದನ್ನು ಸಾರುತ್ತದೆ. ಗೃಹಲಕ್ಷ್ಮಿ ಕವನ ಗಂಡನ ಹೃದಯವನ್ನು ಗೆದ್ದ ಹೆಂಡತಿಯ ಚಿತ್ರಣವೇ ಪದ್ಯದ ಸಾಮಾಗ್ರಿ ಆದರೆ ಅದು ವರ್ಣನೆಯಲ್ಲಿ ಮುಗಿಯುವುದಲ್ಲ ಉದ್ದೇಶಿತ ಜೀವನ ಸಾಮರಸ್ಯದ ಹರಹು 'ಗೃಹಲಕ್ಷ್ಮಿ' ಎಂದು ಕವನಕ್ಕೆ ಹೆಸರು ಕೊಟ್ಟಿರುವುದು ಅವಳಲ್ಲಿ ತುಂಬುವ ಸ್ಥಾನ ಗೌರವವನ್ನು ಸಹಜವಾಗಿ ಹೇಳುತ್ತದೆ. ತನ್ನ ಹೃದಯಗೆದ್ದಾಕೆಯನ್ನು ಗಂಡನ ಅನಿಸಿಕೆಯಲ್ಲಿಯೇ ಕವಿ ಚಿತ್ರವತ್ತಾಗಿಸುವ ಪರಿ ಹೇಗಿದೆ.

ನನ್ನವಳು ನನ್ನೆದೆಯ ಹೊನ್ನಡನಾಳುವಳ
ಬೆಳಗುಗೆನ್ನೆಯ ಚೆನ್ನ ನನ್ನ ಮಡದಿ
ಹೊಳೆಯ ಸುಳಿಗಳಿಗಿಂತ ಆಳ ಕಣ್ಣಿನ ಚೆಲುವು
ಅವಳೊಮ್ಮೆ ಹೆರಳ ಕೆದರಿ
ಕಪ್ಪುಗುರಳನ್ನು ಬೆನ್ನ ಮೆಲ್ಲೆಲ್ಲ ಹರಡಿದರೆ
ದೂರದ ಗಿರಿಯ ಮೇಲೆ
ಇಳಿದಂತೆ ಇರುಳ ಮಾಲೆ[೧]

ಈ ವರ್ಣನೆ ಪಾರಂಪರಿಕ ವರ್ಣನೆಗಿಂತ ಭಿನ್ನವಾದುದು ಕವನದ ನನ್ನವಳು ಎಂಬ ಮಾತೇ ಕವನಕ್ಕೆ ಆಪ್ತತೆಯ ಸಂಚಲನವನ್ನು ನೀಡಿದೆ ಅವಳು ಗಂಡನ ಹೃದಯವನ್ನಾಳುವವಳು ಇದರಲ್ಲಿನ 'ಆಳುವಪದ' ಹೆಂಡತಿಯ ಪ್ರಾಮುಖ್ಯವನ್ನು ಬಿತ್ತರಿಸುವುದು ಹೀಗೆ ಅಂತರಂಗಕ್ಕೆ ಬಂದ ಮೇಲೆ ಅವಳ ಬಾಹ್ಯಚಿತ್ರದ ವರ್ಣನೆಯನ್ನು ಕವಿ ಮಾಡುತ್ತಾರೆ. ಮುಂದಿನ ಭಾಗದಲ್ಲಿ ಹೆಂಡತಿಯ ರೀತಿ ನೀತಿ ಒಡವೆ ವಸ್ತ್ರ ಒಲವು ನಿಲವುಗಳ ಬಗ್ಗೆ ಕವನದ ವಿವರ ಮುಂದುವರಿಯುತ್ತದೆ. ಅದು ಗಂಡನ ಪಾತ್ರದ ಮುಖೇನ ಅವಳ ಬದುಕು ಅರಳುತ್ತಿರುವುದರ ಬಗ್ಗೆ ಕವಿಗೆ ಎಚ್ಚರವಿದೆ ಹಾಗೆಯೇ ಬಂಗಾರದ ಒಡವೆ ಬಯಸಿದ ಹುಡುಗಿ 'ಬಂಗಾರದ ಹುಡುಗಿ'ಯಾಗಿ ಕಾಣಿಸಿಕೊಳ್ಳುವಳು ಗಂಡನ ಕವಿತೆಯಲ್ಲಿ ಮುಖವಾಣಿ ಮಾತ್ರ



೧ ಗೃಹಲಕ್ಷ್ಮಿ, ಮಲ್ಲಿಗೆ ಮಾಲೆ ಪುಟ ೪

ಇಲ್ಲೆಲ್ಲ ಅವನ ಮೂಲಕ 'ಅವಳ' ಕುರಿತ ಅಭಿಪ್ರಾಯವಿದೆಯೇ ಹೊರತು ಅವಳ ಮೂಲಕ ಅವನ ಕುರಿತ ಅನಿಸಿಕೆಗಳು ವ್ಯಕ್ತವಾಗಿಲ್ಲ. ಅವನ ಮನೆಗೆ ಅವಳು 'ಲಕ್ಷ್ಮಿ'ಯಂತೆ ಕಾಣುವುದು ಕವನದಲ್ಲಿ ಅವ್ಯಕ್ತ ದಕ್ಕೆ ಬೇರೆಯ ಕವನಗಳನ್ನು ಆಶ್ರಯಿಸಬೇಕು ಹೀಗೆ 'ಮೊಗುಂ' ಆಗಿ ಉಳಿದುಕೊಂಡ ಗಂಡು ಅಥವಾ ಗಂಡ ಇದ್ದಕಿದ್ದಂತೆಯೇ 'ನಮಗಿಲ್ಲ ನೂರು ಚಿಂತೆ ನಾವು ಗಂಧರ್ವರಂತೆ' ಎಂದು ಘೋಷಿಸಿ ಬಿಡುತ್ತಾನೆ. ಇದರ ಉದ್ದೇಶ ಬದುಕು ಹೀಗೆಯೇ ಇತ್ತು ಎಂದಲ್ಲ ಹೀಗೆ ಇರಬೇಕಾಗಿತ್ತು ಎಂಬುದು ಈ ಹಂತದಲ್ಲಿ ಗಂಡ ಹೆಂಡತಿಯರು ಲೋಕೋತ್ತರ ಸ್ಥಿತಿಯೊಂದನ್ನು ತಲುಪಿದ ಸಂತೋಷದಲ್ಲಿ ತಮ್ಮ ಬದುಕಿನ ಭಾಷ್ಯ ಬರೆಯುತ್ತಾರೆ.

ತಾರೆಗಳ ಮೀಟುವೆವು ಚಂದಿರನ ದಾಟುವೆವು
ಒಲುಮೆಯೊಳಗೊಂದು ನಾವು
ನಮಗಿಲ್ಲ ನೋವು ಸಾವು[೧]

ಕೆ.ಎಸ್.ನರಸಿಂಹಸ್ವಾಮಿಯವರ ಹೆಚ್ಚಿನ ಕವಿತೆಗಳು ಹೆಣ್ಣಿನ ಪರವಾದವು ಅಂದ ಮಾತ್ರಕ್ಕೆ ಇವರನ್ನು ಸ್ತ್ರೀವಾದಿ ಎಂದು ಕರೆಯಲು ಸಾಧ್ಯವಿಲ್ಲ. ಹಾಗೆಂದು ಅವರ ಕವಿತೆಗಳಲ್ಲಿನ ಸ್ತ್ರೀ ಪ್ರಾಮುಖ್ಯವನ್ನು ಅಲ್ಲಗಳೆಯಲಾಗುವುದಿಲ್ಲ ಈ ದೃಷ್ಟಿಯಲ್ಲಿ ಇವು ಜನಪದ ಭಾವಗೀತಾತ್ಮಕ ಕವಿಗಳನ್ನು ಹೋಲುತ್ತವೆ. ವೈಯುಕ್ತಿಕ ವ್ಯಕ್ತಿತ್ವ ಮತ್ತು ತೌರು ಹಾಗೂ ಗಂಡನ ಮನೆಗಳ ನಡುವಣ ಸಾಂಸ್ಕೃತಿಕ ಮಹತ್ವ ಇವೆರಡನ್ನು ಸರಿದೂಗಿಸಿಕೊಂಡು ಹೋಗಬೇಕಾಗಿರುವ ಹೆಣ್ಣಿನ ಬದುಕು ಹಲವು ದೃಷ್ಟಿಗಳಲ್ಲಿ ಮುಖ್ಯವಾದುದು ಮದುವೆಯಾಗಿ ಗಂಡನ ಮನೆಗೆ ಬಂದ ಹೆಣ್ಣು ನಾಚಿಕೆ ಮತ್ತು ಸಂಕೋಚದಂತಹ ಭಾವಗಳನ್ನು ತೋರುವುದು ಸಹಜ ಮೌನಭಾರದ ಹೆಂಡತಿಯ ನಡವಳಿಕೆಯ ಮೇಲೆ ತಿರಸ್ಕಾರದಂಥ ಪರಿಣಾಮವುಂಟಾಗುವುದು ನಿರೀಕ್ಷಿತ ಇಂತಹ ಸಂದರ್ಭದಲ್ಲಿ ಗಂಡ ಹೆಂಡತಿಯರಿಬ್ಬರೂ ಪರಸ್ಪರ ಸಲಿಗೆಗೆ ದಾರಿ ಮಾಡಿಕೊಳ್ಳಬೇಕಾಗುತ್ತದೆ ಗಂಡ ತೆರೆದ ಮನಸ್ಸಿನಿಂದ ಹೆಂಡತಿಯನ್ನು ಬರಮಾಡಿಕೊಳ್ಳುವುದು ಹೆಂಡತಿ ಅಷ್ಟೇ ಆಸಕ್ತಿಯಿಂದ ಅವನ ಮನಸ್ಸನ್ನು ಪ್ರವೇಶಿಸುವುದು ಈ ಹಿನ್ನೆಲೆಯಲ್ಲಿ ರಚಿತವಾದುದು ಬಾರೆನನ್ನ ಶಾರದೆ

ಮದುವೆಯಾಗಿ ತಿಂಗಳಿಲ್ಲ
ನೋಡಿರಣ್ಣ ಹೇಗಿದೆ
ನಾನು ಕೂಗಿದಾಗಲೆಲ್ಲ
ಬರುವಳೆನ್ನ ಶಾರದೆ
ಹಿಂದೆ ಮುಂದೆ ನೋಡದೆ
ಎದುರು ಮಾತನಾಡದೆ[೧]

'ಬಾರೆ ನನ್ನ ಶಾರದೆ' ಕವನದ ವಿಶೇಷವಿರುವುದು ದಾಂಪತ್ಯದ ಆವರಣದೊಳಗಿರುವ ಗಂಡು ಹೆಣ್ಣಿನ ನಡುವಿನ ದೇಹಾಕರ್ಷಣೆಯಲ್ಲಿ 'ಮದುವೆ' ಮುಗ್ಧ ಹೆಣ್ಣುಗಳ ಕೌತುಕದ ಅನಿವಾರ್ಯಕ್ರಿಯೆ 'ನವದಾಂಪತ್ಯದ ಪ್ರಣಯ' ಆ ಸಂದರ್ಭದ ಅವರಿಬ್ಬರ ಅಸ್ತಿತ್ವವನ್ನು ಮಾತ್ರ ಗುರುತಿಸುತ್ತದೆ. ವಿರಸ ವಿರಹದ ವಿರೋಧಾಭಾಸಗಳನ್ನು ಅಲ್ಲಿ ಕ್ಷಣಿಕರಷ್ಟೆ, ದೇಹ ತೀವ್ರತೆ ಇಬ್ಬರನ್ನು ಕಾಡುತ್ತದೆ 'ನಾನು



೧ ಗೃಹಲಕ್ಷ್ಮಿ ಮಲ್ಲಿಗೆ ಮಾಲೆ ಪುಟ ೪
೧ ಗೃಹಲಕ್ಷ್ಮಿ ಮಲ್ಲಿಗೆ ಮಾಲೆ ಪುಟ ೬

ಕೂಗಿದಾಗಲೆಲ್ಲ ಬರುವಳೇನ್ನ ಶಾರದೆ' ಅಂದರೆ ಶಾರದೆ ಒಬ್ಬಳಿಗೆ ಮಾತ್ರ ದೇಹದ ಸುಖದ ಅಗತ್ಯತೆ ಇದೆ ಕರೆದಾಗ ತಡಮಾಡದೆ ಬೇಡವೆನ್ನದೆ ಅನಾದರಣೆ ತೋರದೆ ಬರುತ್ತಾಳೆ ಎಂದಾಗ ಪರಸ್ಪರ ಆಕರ್ಷಣೆಯ ಆತುರ ಅಲ್ಲಿ ಪ್ರಧಾನ.

ಗಂಡಿನ ದೈಹಿಕ ಸುಖದ ಸೆಲೆ ಎಡೆಯೆತ್ತಿದಾಗಲ್ಲಾ ಕೂಡಿಕೆಯ ಆತುರ (ಒಂದು ರೀತಿಯ ಮರೆಮಾಚಿದ ಲಂಪಟತ್ವ) ತೀವ್ರವಾಗುತ್ತದೆ. ಆಗ ಆತ ಹೆಣ್ಣಿನ ಸಾಮಿಪ್ಯ ಬಯಸುತ್ತಾನೆ ನಿರ್ಧಾಕ್ಷಿಣ್ಯ ವಾಗಿ ಅರೆಬರೆ ಹೊತ್ತ ಸಂಕೋಚದ ವರ್ತನೆ ಜೊತೆಗೆಯೇ ಆಕೆ ಹತ್ತಿರ ಸಾರುತ್ತಾಳೆ ಅವರಿಬ್ಬರ ಆ ಸಂದರ್ಭದ ವರ್ಣನೆ ಯಾರ ದಾಂಪತ್ಯ ಯಾರ ಹಿಡಿತಕ್ಕೂ ಇಲ್ಲಿಯ ತನಕ ಸಿಕ್ಕಿಲ್ಲ. ಆ ಮಧುರ ಕ್ಷಣಗಳ ಅಶ್ಲೀಲವಲ್ಲದ ರೀತಿಯಲ್ಲಿ ಹಿಡಿದಿಡುವ ಕವಿಯ ಭಾವ ಕೆ.ಎಸ್.ನ. ರಿಗಲ್ಲದೆ ಮತ್ತ್ಯಾರಿಗೂ ಸಿದ್ದಿಸಿಲ್ಲ ಅದು ಕವಿ ಮೂಷೆಯ ಅನುಭವ. ನವ ದಾಂಪತ್ಯದ ಕವಿ ಸಮಯ ಮದುವೆಯೆಂಬ ಸಂಸ್ಕಾರದ ಹಿಂದಿರುವ ದೇಹ ವ್ಯಾಮೋಹದ ಅಗತ್ಯ ಇಂಥ ಸಾಧ್ಯತೆಗಳನ್ನು ವಿವಾಹ ಪೂರ್ವದಲ್ಲಿ ಅನುಭವಿಸಿದ್ದರೆ ವಿವಾಹ ನಂತರ ನವ ಪ್ರಣಯಕ್ಕೆ ಅಷ್ಟೊಂದು ಕಳೆ ಕಟ್ಟುವುದಿಲ್ಲ. ಲೈಂಗಿಕತೆಯಂತಹ ವಸ್ತುವೇ ಪ್ರಧಾನ ಆದರೂ ನೇತಾತ್ಮಕ ಚೌಕಟ್ಟಿನೊಳಗೆ ಕೊಡುವ ಸ್ವೀಕರಿಸುವ ರಹದಾರಿಯೆ ವಿವಾಹ ಸುಖವನ್ನು ಅನುಭವಿಸಲು ಸಾಧ್ಯ ಅದು 'ಬಾರೆನನ್ನ ಶಾರದೆ' ಕವಿತೆಯಲ್ಲಿ ಪರಿಪೂರ್ಣಗೊಂಡಿದೆ.

ಈ ದಿಸೆಯಲ್ಲಿ ಗಮನಿಸಬಹುದಾದ ಮತ್ತೊಂದು ಕವಿತೆ 'ಒಬ್ಬಳೇ ಮಗಳು'

ಹೆಣ್ಣುಮಕ್ಕಳಿಗೆಲ್ಲ ತೌರೂರು ಬಲುದೂರ
ತೌರೆನಗೆ ನನ್ನಗೌರಿ
ತನ್ನ ಪ್ರೇಮದ ನಡುವೆ ದೇವರ ತವರು
ತೇರವಳು ನನ್ನಗೌರಿ[೧]

ಈ ಕವನದಲ್ಲಿ ಬರದಿರುವ ತೌರನಗೆ ಗೌರಿ ತೇರವಳು ನನ್ನಗೌರಿ ಎಂಬುದು ಹೆಣ್ಣಿನ ಅಗತ್ಯ ಮತ್ತು ಆಪ್ತತೆ ಬಗೆಗಿನ ಗಂಡಿನ ನಿಲುವನ್ನ ಸ್ಫುರಿಸುವುದಾಗಿದೆ.

ಕೆ.ಎಸ್. ನರಸಿಂಹಸ್ವಾಮಿಯವರ 'ಐರಾವತ' ಸಂಕಲನದಲ್ಲಿರುವ ಕವನಗಳಾದ 'ನೀವಲ್ಲವೆ' ಮತ್ತು 'ಗಂಡಹೆಂಡತಿ' ಕವನಗಳಲ್ಲಿ ಒಂದು ಪುರುಷ ಕೇಂದ್ರಿತವಾದರೆ ಮತ್ತು ಗಂಡ ಹೆಂಡತಿ ಕವನಗಳಲ್ಲಿ ಒಂದು ಪುರುಷ ಕೇಂದ್ರಿತವಾದರೆ ಮತ್ತೊಂದು ಸ್ತ್ರೀ ಕೇಂದ್ರಿತ ಮೊದಲನೆಯದರಲ್ಲಿ ಗಂಡನ ವಿಷಯಕ್ಕೆ ಹೆಂಡತಿ ನಿರೂಪಕಳಾದರೆ ಎರಡನೆಯದರಲ್ಲಿ ಹೆಂಡತಿಯ ವಿಷಯಕ್ಕೆ ಗಂಡ ನಿರೂಪಕ ಎರಡರಲ್ಲಿಯೂ ಪ್ರತಿಪಾದಿತವಾಗಿರುವ ಅನ್ಯೋನ್ಯ ದಾಂಪತ್ಯದ ಅನಾವರಣವೆ ಕವಿಯ ಉದ್ದೇಶ 'ನೀವಲ್ಲವೆ' ಕವನದಲ್ಲಿ ವಿವಾಹದ ನಿಕಟಪೂರ್ವ ಮತ್ತು ತದನಂತರದ ಗಂಡನ ಆತ್ಮೀಯ ನಡವಳಿಕೆಯನ್ನು ಹೆಂಡತಿ ದಾಖಲಿಸುವ ವಸ್ತುವಿದೆ ಒಲಿದ ಗಂಡನ ಒಲವುಗಳಿಗೆ ಕವಿಯು ಹೀಗೆ ಅಭಿವ್ಯಕ್ತಿ ನೀಡಿದ್ದಾರೆ

ಹತ್ತು ವರುಷದ ಹಿಂದೆ ಮತ್ತೂರ ತೇರಿನಲ್ಲಿ



೧ ಒಬ್ಬಳೇ ಮಗಳು ಮಲ್ಲಿಗೆ ಮಾಲೆ ಪುಟ ೧೬

ಅತ್ತಿತ್ತ ಸುಳಿದವರು ನೀವಲ್ಲವೆ
ಹತ್ತಿರದ ಹೆಣ್ಣೆಂದು ಮತ್ತೆ ಮತ್ತೂರಿನಲ್ಲಿ
ಒಪ್ಪಿ ಕೈಹಿಡಿದವರು ನೀವಲ್ಲವೆ[೧]

ಈ ಸಾಲುಗಳು ಗಂಡ ಹೆಂಡತಿಯ ಭಾವನಾತ್ಮಕ ಸಂಬಂಧವನ್ನು ಕಟ್ಟಿಕೊಡುತ್ತದೆ ಇಲ್ಲಿ ಹೆಂಡತಿಯ ಮೂಲಕ ಗಂಡನ ನುಡಿದ ಕವಿ ಪದ್ಯದಲ್ಲಿ ಗಂಡನ ಮೂಲಕ ಹೆಂಡತಿಯನ್ನು ನೋಡುತ್ತಾರೆ ಹೆಂಡತಿಯೇ ಈ ಪದ್ಯದ ಸ್ಫೂರ್ತಿ

ಹೆಂಡತಿಯೊಬ್ಬಳು ಮನೆಯೊಳಗಿದ್ದರೆ
ನನಗದೆ ಕೋಟಿ ರೂಪಾಯಿ
ಹೆಂಡತಿಯೊಬ್ಬಳು ಹತ್ತಿವಿದ್ದರೆ
ನಾನು ಒಬ್ಬ ಸಿಪಾಯಿ[೨]

ಹೆಂಡತಿಯನ್ನು ಹೀಗೆ ವೈಭವಿಕರಿಸುವ ನೆಪದಲ್ಲಿ ಪುರುಷನ ಸ್ವಾರ್ಥವೇ ಇರುವಂತಿದೆ ಇಲ್ಲಿ ಹೆಂಡತಿ ಒಂದು ಸಂಪತ್ತಾಗಿ ಪರಿಗಣಿಸಲ್ಪಟ್ಟಿದ್ದಾಳೆ. ಹೆಂಡತಿ ಗಂಡನ ಬೋಗದ ವಸ್ತುವಾಗಿ ಪರಿಗಣಿತವಾಗುವ ಅರ್ಥಪ್ರಣೀತ ಆದರೆ ಗಂಡ ಹೆಂಡತಿಯ ಭೋಗದ ವಸ್ತುವಾಗುವ ಭಾವವೇನೂ ಇದರಿಂದ ಹೊರಡುವುದಿಲ್ಲ.

ಕೆ.ಎಸ್. ನ. ಅವರ ಬಹುತೇಕ ಕವಿತೆಗಳಲ್ಲಿ ಎದ್ದು ಕಾಣುವ ಅಂಶ ಬುದ್ಧಿಗಿಂತ ಹೃದಯವನ್ನು ಅರಳಿಸುವ ಗುಣವನ್ನು ಇವು ಹೊಂದಿವೆ. ಆಹ್ಲಾದವನ್ನೆ ಪರಮಮೌಲ್ಯವಾಗುಳ್ಳ ಇಂತಹ ಕವಿತೆಗಳ ಎರಡು ಉದಾಹರಣೆಗಳಾಗಿ 'ನೀಬರುವದಾರಿಯಲ್ಲಿ' ಮತ್ತು ಅಂಥಿಂಥ ಹೆಣ್ಣು ನೀನಲ್ಲ ಕವನಗಳ್ನು ಗಮನಿಸ ಬಹುದು ಒಂದು ಹಾರೈಕೆ ಹೊತ್ತಿದ್ದರೆ ಮತ್ತೊಂದು ಪ್ರಶಂಶಾ ರೂಪವನ್ನು ತಳೆದಿದೆ ಎರಡು ಗಂಡಿನ ನೋಟಗಳೇ ಹೆಣ್ಣು ಅಲ್ಲಿ ಪ್ರಶಂಸೆ ಹಾಗೂ ಹಾರೈಕೆ ಎರಡಕ್ಕೂ ವಸ್ತುವಾಗಿದ್ದಾಳೆ.

ಈ ಬಗೆಯ ಕವಿತೆಗಳಲ್ಲಿ 'ಮನೆಗೆ ಬಂದ ಹೆಣ್ಣು' ಮತ್ತು 'ಅಕ್ಕಿಯಾರಿಸುವಾಗ' ಕವಿತೆಗಳು ವಿಶೇಷವಾದವುಗಳು ಈ ಎರಡರಲ್ಲಿಯೂ ಹೆಣ್ಣನ್ನು ವಸ್ತುವನ್ನಾಗಿಸಿಕೊಂಡಿದ್ದರೂ ಗಂಡ ಹೆಂಡತಿಯರ ಸಂಬಂಧದ ಭಾವನೆಗಳನಿಟ್ಟು ಇವಳನಿಲ್ಲಿ ನೋಡಿಲ್ಲ ಬೇರೆಯದೆ ಆದ ಮನ ಪರಿಸ್ಥಿತಿಯಲ್ಲಿ ನೋಡಲಾಗಿದೆ 'ಮನೆಗೆ ಬಂದ ಹೆಣ್ಣು' ಕವಿತೆಯಲ್ಲಿನ ಹೆಣ್ಣನ್ನು ಕುರಿತ ಕವಿಯ ಅಭಿವ್ಯಕ್ತಿ ಹೀಗಿದೆ.

ಮೊದಲದಿನ ಮೌನ ಆಳುವ ತುಟಿಗೆ ಬಂದಂತೆ
ಚಿಂತೆ ಬಿಡಿ ಹೂವ ಮುಡಿದಂತೆ
ಹತ್ತು ಕಡೆ ಕಣ್ಣುಸಣ್ಣಗೆ ದೀಪ ಉರಿದಂತೆ
ಜೀವದಲ್ಲಿ ಜಾತ್ರೆ ಮುಗಿದಂತೆ
ಎರಡನೆಯ ಹಗಲು ಇಳಿಮುಖವಿಲ್ಲ ಇಷ್ಟನಗು
ಮೂಗುತಿಯ ಮಿಂಚು ಒಳ ಹೊರಗೆ



೧ ನೀವಲ್ಲವೇ ಮಲ್ಲಿಗೆ ಮಾಲೆ ಪುಟ ೬೯
೨ ಗಂಡಹೆಂಡತಿ ಮಲ್ಲಿಗೆ ಮಾಲೆ ಪುಟ ೭೨

ನೀರೊಳಗೆ ವೀಣೆ ಮಿಡಿದಂತೆ ಆಡಿದ ಮಾತು
ಬೇಲಿಯಲಿ ಹಾವು ಹರಿದಂತೆ
ಸಂಜೆಯಲಿ ರಾತ್ರಿ ಇಳಿದಂತೆ ಬಿರುಬಾನಿಗೂ
ಹುಣ್ಣಿಮೆಯ ಹಾಲು ಹರಿದಂತೆ

ಮದುವೆಯಾಗಿ ಗಂಡನಮನೆಗೆ ಬಂದ ಹೆಣ್ಣೊಬ್ಬಳ ಹೊಸ ವಾತಾವರಣದ ಅಪರಿಚಿತ ಸ್ಥಿತಿಇಲ್ಲಿ ವ್ಯಕ್ತವಾಗಿದೆ ಗಂಡನ ಮನೆಯ ಎಲ್ಲರ ನಡುವೆ ಯಾವುದೆ ಸಲುಗೆ ಸಖ್ಯ ಇರುವುದಿಲ್ಲ ಯಾರ ಜೊತೆ ಮಾತನಾಡಿದರೂ ಸಂಕೋಚ ಪ್ರಧಾನ ಗಂಡನ ಸಮೇತ ಎಲ್ಲರೂ ಹೊಸಬರೆ ಅವರ ಜೊತೆ ಹೊಂದಿಕೊಳ್ಳಬೇಕಾದ ಆರಂಭದ ದಿನ ಆ ಹೆಣ್ಣು ಮಗಳು ಅನುಭವಿಸುವ ನೋವನ್ನು ಕವಿ ಹಿಡಿದಿಟ್ಟಿದ್ದಾನೆ.

ಅತ್ತೆಮಾವ ಏನ್ನನ್ನುವರೊ ಮೈದುನರ ಪ್ರತಿಕ್ರಿಯೆ ನೆರೆಹೊರೆ ತನ್ನ ಬಗೆಗಿನ ನಿಲುವು ಏನು ಎಂಬ ಆಂತಕದೊಳಗೆ ಆರಂಭದ ದಿನಗಳ್ನು ಆಕೆ ಕಳೆಯುತ್ತಾಳೆ.

ಮಾರನೆಯ ಸಂಜೆ ಹೆರಳಿನ ತುಂಬ ತಂಡೆಹೂ
ಹೂವಿಗೆ ಜೀವ ಬಂದಂತೆ
ಸಂಜೆಯಲಿ ರಾತ್ರಿ ಇಳಿದಂತೆ ಬಿರು ಬಾನಿಗೂ
ಹುಣ್ಣಿಮೆಯ ಹಾಲು ಹರಿದಂತೆ

ದಿನಗಳದಂತೆ ಆಕೆ ಹೊಂದಿಕೊಂಡು ಮನೆಯ ಸದಸ್ಯರಲ್ಲಿ ಒಬ್ಬಳಾಗಿ ಸಡಗರ ಅನುಭವಿಸುವ ಸಂದರ್ಭ ಮನೋಜ್ಞವಾಗಿದೆ ಹೂವಿಗೂ ಜೀವ ಬರುವುದು ಹುಣ್ಣಿಮೆಯ ಹಾಲು ಹರಿದಂತೆ ಆಕೆಯ ಹೊಸ ಪರಿಸರದಲ್ಲಿ ಬದುಕಿನ ಬಗ್ಗೆ ಮಾಡುವ ಆಶಾಭಾವನೆ.

ಅಕ್ಕಿಯಾರಿಸುವಾಗ ಕವಿತೆಯು ಈ ರೀತಿಯ ಹೆಣ್ಣಿನ ಚಿತ್ರಣವನ್ನು ಕೊಡುತ್ತದೆಯಾದರೂ ಈ ಕವನದಲ್ಲಿ ಪ್ರಣಯವಾಗಲಿ ಪದ್ಯವಾಗಲಿ ಕಂಡು ಬರುವುದಿಲ್ಲ. ನಿಗೂಢತೆ ಮತ್ತು ಧೃಡತೆಗಳು ಕವನದಲ್ಲಿ ಕಾಡಿದಂತಿವೆ.

ಮೃಧುಭಾವದ ಅಭಿವ್ಯಕ್ತಿಯಾಗಿರುವ ಕೆ.ಎಸ್.ನ. ಕವಿತೆಗಳಲ್ಲಿ ಹೆಣ್ಣು ಸುಖದಾಂಪತ್ಯ ಗಂಡಿನ ನಿಲುವು ಇವುಗಳ ಚಿತ್ರಣವೇ ಮುಖ್ಯವಾಗಿ ಬರುತ್ತವೆ ಆದರೆ ನಿಮ್ಮ ಸಂಸಾರ ಇದು ಎಂಬ ಕವಿತೆ ಈ ರೀತಿಯ ಕವನಗಳಿಗಿಂತ ಭಿನ್ನವಾಗಿದೆ ಸಂಸಾರದ ಹೊಣೆಯನ್ನು ಹೆಣ್ಣು ಹೊರಬೇಕಾಗಿ ಬಂದು ಅದರಿಂದ ತಪ್ಪಿಸಿಕೊಳ್ಳಲು ಯತ್ನಿಸುವ ಗಂಡಿನ ವಿರುದ್ಧ ಒಂದು ಸಣ್ಣ ಪ್ರತಿಭಟನೆಯನ್ನು ಇಲ್ಲಿ ಕಾಣುತ್ತೇವೆ. ಸಂಭಾಷಣೆಯ ರೂಪದಲ್ಲಿದ್ದರೂ ಹೆಂಡತಿಯೊಬ್ಬಳೇ ಇಲ್ಲಿ ಮಾತನಾಡುವುದು ನಿನ್ನಮನೆ, ನಿನ್ನ ಮಗು, ನಿನ್ನ ಸಂಸಾರ, ಎಂದು ಗಂಡ ಹೆಂಡತಿಗೆ ಹೇಳುವ ಮಾತು ಇದಕ್ಕೆ ಹೆಂಡತಿ ಉತ್ತರ ರೂಪದ ಪ್ರಶ್ನೆ ಹೀಗಿದೆ. 'ಅಧಿಕಾರ ಮಾತ್ರ ನಿನ್ನದೆ ದುಡಿಮೆ ನನ್ನದು' ದುಡಿಯುವ ಹೆಂಡತಿಯ ಮೇಲೆ ಅಧಿಕಾರ ಚಲಾಯಿಸುವ

ಗಂಡನ ಪ್ರವತ್ತಿಯನ್ನು ಇಲ್ಲಿ ಟೀಕಿಸಲಾಗಿದೆ 'ಕಂಬಕ್ಕೆ ಹೆಣ್ಣು ಹದವೆಂದು' ಎಂಬ ಮಾತು ಅವಳ ಸಂಸಾರದ ನೋವು ಯಾತನೆಯನ್ನು ವಿಷಾದ ಪೂರ್ಣ ಧ್ವನಿಯಲ್ಲಿ ವ್ಯಕ್ತಪಡಿಸುತ್ತದೆ. ಸಂಸಾರದೊಳಗೆ ಹೆಣ್ಣಿನ ಶೋಷಣೆಯ ಚಿತ್ರವೂ ಇದರಿಂದ ಲಭ್ಯವಾಗುವುದು ಇಷ್ಟಾದರೂ ಸಂಸಾರವನ್ನು ಸಮಸ್ಥಿತಿಗೆ ಕೊಂಡೊಯ್ಯುವ ಮನಸ್ಸು ಅವಳದು ಅದಕ್ಕಾಗಿ ಈ ಮಾತು.

ಬಿಡಿ ಬಿಡಿರಿ ಮಾತಿದು ನಮ್ಮ ಸಂಸಾರ
ಎಂದೆಂದಿಗೂ ನಿಮ್ಮದಾಗಿ ಅದರಂಚಿನಲ್ಲಿ
ಕಟ್ಟಿಹೆನು ಒಂದು ತೊಟ್ಟಿಲನು

'ನನ್ನ ಸಂಸಾರ' ಅವನ ಸಂಸಾರವೂ ಆಗಿ ಅದು ನಮ್ಮ ಸಂಸಾರವಾಗಬೇಕೆಂಬ ಉತ್ಕಟ ಇಚ್ಛೆಯಲ್ಲಿ ಅವಳ ವಿಚಾರ ಸರಣಿ ಸಾಗುವುದು ಈ ಭಾಂದವ್ಯಕ್ಕೆ ಮಗು ಸೇತುವೆಯಾಗಿರುವುದನ್ನು ಧ್ವನಿ ಪೂರ್ಣವಾಗಿ ಹೇಳಿರುವುದನ್ನಲ್ಲಿ ಗಮನಿಸಬಹುದು.

ಹತ್ತಾರು ವರ್ಷ ನಮ್ಮ ಸಂಸಾರ ಮಾಡಿದ ಮೇಲೆ
ಏನೀದಿ ಹಗಲ ಸನ್ಯಾಸ ಹತ್ತಿರ ಬಂದು
ಆಡಿದ್ದು ತಪ್ಪುಮಾತೆಂದು ಕಂದನತುಟ್ಟಿಗೆ
ಮುತ್ತಿಟ್ಟು ಎದ್ದು ಹೋಗಿರಿ ಮೂರು ತೆಪ್ಪ ತೇಲಿತು

ಕಂದನನ್ನು ಸಾಕ್ಷಿಯಾಗಿಟ್ಟುಕೊಂಡು ಅವಳು ಹೇಳುವ ಮಾತು ಆಪ್ತವಾದದ್ದಾದರೂ ಅದರಲ್ಲಿ ವಿಷಾದ ಬೆರೆತಿದೆ ಸಂಸಾರದಲ್ಲಿದ್ದರೂ ಅನಾಸಕ್ತನಾದರೆ ಅದು ಅವಳಿಗೆ ಕೋಪ ಸಂಸಾರದ ಬಗ್ಗೆನ ಅವನ ವರ್ತನೆ ಅನಾಸಕ್ತಿಯೋ ಔದಸೀನ್ಯವೋ ತಿಳಿಯದು 'ಹಗಲ ಸಂನ್ಯಾಸ' ಎಂಬ ಮಾತಿರುವುದರಿಂದ ಪಲಾಯನವಾದವೋ ಇರಬೇಕು ಈ ತಪ್ಪನ್ನು ಒಪ್ಪಿಕೊಳ್ಳಬೇಕೆಂಬುದು ಅವಳ ಆಗ್ರಹ ಮಗುವಿಗೆ ಮುತ್ತಿಡುವುದರ ಮೂಲಕ ಪರಿಹಾರ ಕಂಡುಕೊಳ್ಳಬೇಕೆಂಬ ಅಚಲ ನಿರ್ಧಾರವಿರುವುದು ಸ್ಪಷ್ಟವಿದೆ ಹೀಗೆ ಕೌಟಂಬಿಕ ಸಂಘರ್ಷಾತ್ಮಕವಾದರೂ ಸ್ತ್ರೀವಾದಿನೆಲೆಯಿಂದ ಯೋಚಿಸಬೇಕಾದ ಪ್ರಗತಿಪರವಾದ ಆಶಯವನ್ನು ಹೊಂದಿದೆ ಕೌಟುಂಬಿಕ ವಸ್ತು ಕುರಿತ ಕವನಗಳಲ್ಲಿ ಕಾಣಿಸಿಕೊಂಡಿರುವ ಬೆಳವಣಿಗೆಯನ್ನು ಈ ಕವಿತೆ ಸಾರುತ್ತದೆ. ಇಂತಹ ಮಾನಸಿಕ ಮತ್ತು ದೈಹಿಕವಾದ ನೋವಿನ ಚಿತ್ರಣವನ್ನು ಕವಿ ಕೊಡುವುದರಲ್ಲಿ ಯಶಸ್ವಿಯಾಗಿದ್ದಾನೆ.

ಕೆ.ಎಸ್. ನರಸಿಂಹಸ್ವಾಮಿಯವರ ಮತ್ತೊಂದು ಕವನ 'ಬಳೆಗಾರನ ಹಾಡು'ವಿನಲ್ಲಿ ಮಾವನ ಮೇಲಿನ ಮುನಿಸಿನಿಂದ ಗಂಡ ತನ್ನ ಹೆಂಡತಿಯನ್ನ ನೋಡಲು ಹೋಗಿರುವುದಿಲ್ಲ ಈ ಹಿನ್ನಲೆಯಲ್ಲಿ ಆಕೆಯ ವೇದನೆಯನ್ನು ಬಳೆಗಾರ ಗಂಡನಿಗೆ ತಿಳಿಸುವ ರೀತಿಯಲ್ಲಿ ಅಭಿವ್ಯಕ್ತಿಯಿದೆ.

ಸಿರಿಗೌರಿಯಂತೆ ಬಂದು ತಾಯಿ ಹಸಮಣೆಗೆ
ಸೆರಗಿನಲಿ ಕಣ್ಣೀರನೊರಸಿ
ಸುಖದೊಳಗೆ ನಿಮ್ಮ ನನೆದರು ತಾಯಿ ಗುಣವಂತೆ
ದೀಪದಲಿ ಬಿಡುಗಣ್ಣನಿರಿಸಿ[೧]



೧ ಬಳೇಗಾರನ ಹಾಡು ಮಲ್ಲಿಗೆ ಮಾಲೆ ಪುಟ ೬೭

ಈ ಕವನದಲ್ಲಿನ 'ಸುಖದೊಳಗೆ ನಿಮ್ಮ ನೆನೆದರು ತಾಯಿ' ಎಂಬ ಮಾತು ಗಂಡನ ಪರವಾದ ಅವಳ ನಿಲುವನ್ನು ವಾದಿಸುವಂತೆ ತೋರುತ್ತಾ ಅವನನ್ನು ಮೆದುಗೊಳಿಸಿ ಆಕಡೆಗೆ ಸೆಳೆಯುವ ತಂತ್ರವನ್ನು ಹೇಳುವಂತಿದೆ 'ಗುಣವಂತೆ' ಎಂಬ ಪದ ಅವಳ 'ಪರಿಶುದ್ಧ' ವ್ಯಕ್ತಿತ್ವ ಮತ್ತು ಮುಗ್ಧತೆಯ ಪ್ರತೀಕವಾಗಿದೆ.

'ಹಿಂಡಬಾರದು ದುಂಡು ಮಲ್ಲಿಗೆಯದಂಡೆಯನು' 'ಒಣಗಬಾರದು ಒಡಲ ಚಿಲುಮೆ' ಎಂಬೆಲ್ಲ ಮಾತುಗಳು ಪರಸ್ಪರ ನಡುವೆ ಸಂಬಂಧವನ್ನು ಮುಂದುವರಿಸುವ ಆಶಯವನ್ನು ಸಮರ್ಥಿಸುತ್ತವೆ. ಇವೆಲ್ಲಾ ಅವಳ ಒಳ ಮನಸ್ಸನ್ನು ಹೊಡೆದು ಸಾಕ್ಷಾತ್ಕರಿಸಿ ತೋರಿಸುತ್ತವೆ. ಹೀಗೆ ಹೆಣ್ಣಿನ ಮನಸ್ಸಿನ ಭಾವನೆಗಳೆಲ್ಲವೂ ಗಂಡನ್ನು ಕುರಿತಾದ ಭಾವನೆಗಳೇ ಆಗಿವೆ.

ಒಟ್ಟಾರೆ ಕೆ.ಎಸ್. ನರಸಿಂಹಸ್ವಾಮಿಯವರ ಕಾವ್ಯಕ್ಷೇತ್ರದಲ್ಲಿ ಮಹಿಳಾ ಕೇಂದ್ರಿತ ಮತ್ತು ಪುರುಷ ಕೇಂದ್ರಿತ ಎರಡು ನೆಲೆಯಲ್ಲೂ ಕವನ ರಚನೆಯಾಗಿವೆ ಅದರೊಳಗೆ ಪುರುಷನನ್ನು ಕುರಿತ ಸ್ತ್ರೀ ಭಾವನೆಗಳ ಅಭಿವ್ಯಕ್ತಿಯೇ ಹೆಚ್ಚಾಗಿ ಮೂಡಿ ಬಂದಿರುವುದನ್ನು ಕಾಣಬಹುದು ಹೆಣ್ಣಿನ ಸುಕೋಮಲ ಭಾವನೆ ಸಹಜವೆಂಬ ರೀತಿಯಲ್ಲಿ ಕವಿ ಅಭಿವ್ಯಕ್ತಿಸಿದ್ದಾರೆ. ಸಂಪ್ರದಾಯಕವಾದ ದಾಂಪತ್ಯದ ಚೌಕಟ್ಟಿನಲ್ಲಿಯೇ ಹೆಣ್ಣನ್ನು ಪರಿಭಾವಿಸಲಾಗಿದೆ.

ಬೇಂದ್ರೆ ಕಾವ್ಯ ಜನಪರವಾದುದು ಅದರಲ್ಲೂ ಮುಖ್ಯವಾಗಿ ಪುರುಷ ಪ್ರಧಾನ ವ್ಯವಸ್ಥೆಯ ನೆಲೆಯಲ್ಲೆ ವಿಕಸನಗೊಂಡ ಸೃಜನಶೀಲ ಪ್ರತಿಭೆ ಕಾವ್ಯದಲ್ಲಿನ ಪ್ರಣಯದೃಷ್ಟಿ ಲಿಂಗಭೇದದಿಂದ ದೂರವುಳ್ಳದ್ದು ಎಂಬುದು ಹಲವು ವಿಶೇಷ ಸಾಧನೆಗಳಲ್ಲೊಂದು ಎಂಬ ಮಾತು ಹೇಗೋ ಹಾಗೆಯೇ ಮಹಿಳಾ/ಸ್ತ್ರೀ ಗೊಂದು ಸಮಕಾಲಿನ ವ್ಯಕ್ತಿತ್ವ ನಿರ್ಮಾಣವಾದುದು ಕೂಡ ಮಹತ್ವದ ಸಂಗತಿ ಎಂದೇ ತೋರುತ್ತದೆ. ಅಷ್ಟೇ ಅಲ್ಲದೆ ಪ್ರಣಯವೆಂಬುದು ಇನ್ನೊಂದು ವಿಶೇಷವೆಂದೆ ಹೇಳಬೇಕೆನಿಸುತ್ತದೆ. 'ನಾನು ಬಡವಿ ಆತ ಬಡವ' ಕವನ ಇದಕ್ಕೆ ಉತ್ತಮ ನಿದರ್ಶನ ಇದು ಹೆಣ್ಣು ಮತ್ತು ಗಂಡಿನ ನಡುವಿನ ಸಮಾನತೆಯನ್ನು ಬಿಂಬಿಸುವ ಗುಣಾತ್ಮಕ ಅಭಿವ್ಯಕ್ತಿ.

ಬೇಂದ್ರೆಯವರು ತಮ್ಮ ಕವಿತೆಗಳಲ್ಲಿ ಹೆಣ್ಣಿಗೆ ಸಮಾನ ಸ್ಥಾನಮಾನಗಳನ್ನು ಕೊಡಲು ಪ್ರಯತ್ನಿಸಿರುವುದು ಹೆಂಡತಿಯನ್ನು ಕೇವಲ ಭೋಗದ ವಸ್ತುವನ್ನಾಗಿ ನೋಡದೆ ಸಖಿಯಾಗಿ ಗೆಳತಿಯಾಗಿ ಕಾಣಲು ಯತ್ನಿಸಿರುವುದು ಮತ್ತೊಂದು ಪ್ರಮುಖ ಅಂಶ ಬೇಂದ್ರೆ ಕಾವ್ಯದಲ್ಲಿ ದಾಂಪತ್ಯ ಜೀವನದ ಪ್ರೇಮ ಕಾಮದ ಗೆಲುವಿನ ಸಫಲ ಚಿತ್ರಗಳು ಇವೆ. ಇದಕ್ಕೆ ಪೂರಕವಾಗಿ ಕೆ.ಎಸ್. ನರಸಿಂಹಸ್ವಾಮಿಯವರ ದಾಂಪತ್ಯ ಕಾವ್ಯವನ್ನು ಗಮನಿಸಿದಾಗ ಗೆಲುವಿನ ಸಫಲತೆಯ ಚಿತ್ರಣಗಳೇ ಪ್ರಧಾನವಾಗಿ ದೊರೆಯುತ್ತವೆ. ಬೇಂದ್ರೆಯವರು ತಮ್ಮ ಹಲವಾರು ಕವನಗಳಲ್ಲಿ ಹೆಣ್ಣನ್ನು ತಾಯಿಯಾಗಿ ದೇವತೆಯಾಗಿ ಉದಾತ್ತೀಕರಿಸಿದ್ದಾರೆ ಅದಕ್ಕೆ ಮೂಲ ಎಳೆತನದಲ್ಲಿ ತಂದೆಯನ್ನು ಕಳೆದುಕೊಂಡು ತಾಯಿ ಅಜ್ಜಿಯರ ಮಾತೃ ಪ್ರಧಾನ ವಾತ್ಸಲ್ಯದ ವಾತಾವರಣದಲ್ಲಿ ಬೆಳೆದದ್ದು ಕಾರಣವಿರಬೇಕು.

ತಮ್ಮ ಕಾವ್ಯಗಳ ಮೂಲಕ ಕೌಟುಂಬಿಕ ಬದುಕು ಹಾಗೂ ಶೃಂಗಾರ ಕ್ಷಣಗಳನ್ನು ಹಾಗೂ ದಾಂಪತ್ಯದ ವಿಭಿನ್ನ ಒಳನೋಟಗಳನ್ನು ಯಾವುದೇ ಮೂಲಾಜಿಗೆ ಒಳಗಾಗದೆ ಅಶ್ಲೀಲ ಪದಗಳನ್ನು

ಬಳಸದೆ ಒಂದು ಪರಿಪೂರ್ಣ ಶಿಲ್ಪಗಳನ್ನಾಗಿ ಕಟ್ಟಿಕೊಟ್ಟಿದ್ದಾರೆ.

ಸರಸ ಪ್ರಧಾನವಾದ ವಿರಹ ಕ್ಷಣಕವೆನಿಸಿದ ಸಮರಸದ ಬಾಳ್ವೆಗೆ ಋಣಾತ್ಮಕ ಸ್ವರೂಪಗಳು ಆಕರ್ಷಿಸುವ ಉದ್ದೀಪನ ಆಲಂಭನಾ ಭಾವಗಳನ್ನು ಸ್ಫುರಿಸುವ ಬಂಧ ಕವನಗಳ ಆಶಯಕ್ಕೆ ಕನ್ನಡಿ ಹಿಡಿದಂತಿವೆ.

ಕವಿಗಳಿಗೆ ಕಾವ್ಯದ ವಸ್ತುಗಳಾಗಿ ಭೌತಿಕ, ಅಭೌತಿಕ, ಸ್ವರೂಪಗಳು ಯಾವುದೆ ರೂಪದಲ್ಲಿ ಸಿಕ್ಕಿದರೂ ಕವಿಯ ಪ್ರತಿಭಾ ಮೂಸೆಗೆ ಸಿಕ್ಕಿದ ಯಾವುದೆ ಒಂದು ವಸ್ತು ಪ್ರೇರಪಣೆಗೊಂಡು ಉತ್ತಮ ಅಭಿವ್ಯಕ್ತಿಯಾಗಿ ಮೂಡುತ್ತದೆ. ಬೇಂದ್ರೆ, ಕೆ.ಎಸ್.ನ ಇಬ್ಬರಲ್ಲೂ ಕಾಣುವ ಪ್ರಕೃತಿ ಕೌಟುಂಬಿಕ ಬದುಕಿನ ಒಂದು ಭಾಗ ಪ್ರಕೃತಿಯೇ ಪ್ರಧಾನ ವಸ್ತುವಾಗುಳ್ಳ ಕಾವ್ಯ ಕುವೆಂಪು, ಪು.ತಿ.ನ ಮುಂತಾದವರಿಂದ ಸಾಧ್ಯ.

# ಭಾಷಾ ವೈವಿಧ್ಯತೆ

ಕಾವ್ಯದ ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಅತ್ಯಂತ ಪ್ರಮುಖವಾದುದು ಭಾಷೆ ಒಬ್ಬ ಸೃಜನಶೀಲ ಲೇಖಕ ಭಾಷೆಯನ್ನು ಯಶಸ್ವಿಯಾಗಿ ದುಡಿಸಿಕೊಳ್ಳಲು ಅನೇಕ ಪ್ರಕಾರದಲ್ಲಿ ಭಾಷೆಯನ್ನು ಕಾವ್ಯಾಭಿವ್ಯಕ್ತಿಯಲ್ಲಿ ಬಳಕೆ ಮಾಡಿಕಳ್ಳಲು ಸಾಧ್ಯವಿರುತ್ತದೆ. ಅದು ಶಿಷ್ಟಭಾಷೆಯಾಗಿರಬಹುದು ಇಲ್ಲ ದೇಸಿಯ ಲಯಗತಿ ಇರಬಹುದು ಅಥವಾ ಒನಪು ವೈಯ್ಯಾರ,ನಾಣ್ನುಡಿ ಮೋಡಿಗಾದೆ ಇವುಗಳನೆಲ್ಲಾ ತನ್ನ ಕಾವ್ಯದ ಲಯಕ್ಕೆ ಅರ್ಥಕ್ಕೆ ಹೊಂದಿಕೊಳ್ಳುತ್ತಾನೆ. ಹಾಗೆಯೇ ಬೇಂದ್ರೆಯವರು ಕೂಡ ತಮ್ಮ ಕಾವ್ಯದಲ್ಲಿ ಈ ಎಲ್ಲಾ ಸಾಧ್ಯತೆಗಳನ್ನು ಬಳಸಿಕೊಂಡಿರುತ್ತಾರೆ. ಬೇಂದ್ರೆಯವರು ತಮ್ಮ ಕಾವ್ಯರಚನೆಯಲ್ಲಿ ಕನ್ನಡದ ವಿವಿಧ ಪ್ರಭೇದಗಳನ್ನು ಬಳಸಿಕೊಂಡಿದ್ದರು. ಪ್ರಧಾನವಾಗಿ ಅವರನ್ನು ಗುರುತಿಸುವುದು ಒಬ್ಬ ಕವಿಯಾಗಿ ದೇಸಿ ಪ್ರಕಾರವಾದ ಉತ್ತರ ಕರ್ನಾಟಕದ ಜನಪದ ಭಾಷೆಯೊಂದನ್ನು ಸಶಕ್ತವಾಗಿ ಬಳಸಿಕೊಂಡು ಯಶಸ್ವಿಯಾಗಿ ಕಾವ್ಯ ರಚಿಸಿದ ಮೊದಲ ಕವಿ ಎನ್ನಬಹುದು.

ಬೇಂದ್ರೆ ಕನ್ನಡದಲ್ಲಿ ಕಾವ್ಯ ಬರೆಯುವ ಹೊತ್ತಿಗಾಗಲೇ ಕನ್ನಡದಲ್ಲಿ ಯಾವುದೇ ಒಂದು ಸಿದ್ಧಮಾದರಿ ಕಾವ್ಯ ಭಾಷೆ ಇರಲಿಲ್ಲ. ಇದೇ ಸಂದರ್ಭದಲ್ಲಿ ದಕ್ಷಿಣ ಕನ್ನಡ, ಉತ್ತರ ಕನ್ನಡ, ಮೈಸೂರು ಪ್ರಾಂತ್ಯಗಳಲ್ಲಿ ಏಕಕಾಲಕ್ಕೆ ನವೋದಯಕಾವ್ಯ ಆರಂಭವಾಗಿ ಗೋವಿಂದ ಪೈ, ಕುವೆಂಪು, ಬಿ.ಎಂ.ಶ್ರೀ ಮಾಸ್ತಿ, ಪು.ತಿ.ನ. ಮುಂತಾದ ಮಹತ್ವದ ಕವಿಗಳು ಅವರದೇ ಆದ ಶೈಲಿಯಲ್ಲಿ ಕಾವ್ಯ ರಚನೆ ಮಾಡುತ್ತಿದ್ದರು. ಹೀಗಿರುವಾಗ ಕೇಶಿರಾಜ ಮತ್ತು ಕವಿರಾಜಮಾರ್ಗಕಾರ ಹೇಳುವ ಹಾಗೇ ಹಿಂದಿನಿಂದಲೂ ಕಂಡರ್‌ಪೇಳ್ವ ದೇಸಿ ಛಂದಸ್ಸು ಗ್ರಾಮ್ಯ ಭಾಷೆಯಲ್ಲಿ ಬರೆಯುತ್ತಿದ್ದ ಉಲ್ಲೇಖಗಳಿದ್ದರೂ ಆಧುನಿಕ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಬೇಂದ್ರೆ ಗ್ರಾಮ್ಯ ಭಾಷೆಯಲ್ಲಿ ಕಾವ್ಯರಚನೆ ಆರಂಭಿಸಿದ್ದು ಐತಿಹಾಸಿಕವಾದದ್ದು. ಬೇಂದ್ರೆ ಆಡುಮಾತಿನ ಶೈಲಿಯನ್ನು ಜನಪದ ಮಟ್ಟನ್ನು ತಮ್ಮ ಕಾವ್ಯರಚನೆಯಲ್ಲಿ ಹೆಚ್ಚಾಗಿ ಬಳಸಿಕೊಂಡರು.

ವೈದಿಕ ಪರಂಪರೆಯಿಂದ ಬೇಂದ್ರೆ ತಮ್ಮ ಕಾವ್ಯದ ಅಭಿವ್ಯಕ್ತಿ ವೈದಿಕ ಮಾದರಿಯ ಕಾವ್ಯಭಾಷೆಯನ್ನು ಬಳಸದೇ ತನ್ನದಲ್ಲದ್ದ ಶುದ್ಧಗ್ರಾಮ್ಯ ಮೂಲಕ ಜನಪದ ಭಾಷೆಯನ್ನು ತಮ್ಮ ಕಾವ್ಯದ ಅಭಿವ್ಯಕ್ತಿ ಮಾಧ್ಯಮವಾಗಿ ಜನಪದ ಮೂಲ ಮಟ್ಟುಗಳಲ್ಲಿ ಕಾವ್ಯರಚಿಸಿ ಯಶಸ್ವಿಯಾಗಿರುವದು ಅವರ ಸತ್ವಕ್ಕೆ ಹಿಡಿದ ಕೈಗನ್ನಡಿ. ಬೇಂದ್ರೆಯವರ ಶೈಲಿ ಜನಪದ ಭಾಷೆಯಲ್ಲಿದ್ದು ಪ್ರಯೋಗಶೀಲವಾಗಿದೆ. ಅವರ ಸೃಜನಶೀಲ ಪ್ರತಿಭೆಯೊಂದು ಸಂಪ್ರದಾಯ ಹಾಕಿಕೊಟ್ಟ ಮಾರ್ಗದಲ್ಲಿ ನಡೆಯದೆ ಸದಾ ಪ್ರಯೋಗಶೀಲತೆಯಲ್ಲಿ ತನ್ನನ್ನು ಕಂಡುಕೊಳ್ಳುವ ಪ್ರಯತ್ನಮಾಡಿದೆ. ಬೇಂದ್ರೆಯವರು ನಾದಬ್ರಹ್ಮನ ಉಪಾಸಕರು ಕಾವ್ಯದಲ್ಲಿ ಅರ್ಥಕ್ಕಿಂತ ಭಾವ, ತರ್ಕಕ್ಕಿಂತ ನಾದ ಮುಖ್ಯ ಎಂದು ನಂಬಿದವರು. ಆದ್ದರಿಂದಲೇ ಕನ್ನಡ ಭಾವಗೀತೆಗಳ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವನ್ನು ಪಡೆದವರು ಬೇಂದ್ರೆ ಮಾತ್ರ.

ಬೇಂದ್ರೆ ಇತರ ಪ್ರಕಾರಗಳಲ್ಲಿ ಕೆಲಸ ಮಾಡಿದ್ದರೂ ಅವರ ಪ್ರಧಾನ ಅಭಿವ್ಯಕ್ತಿ ಮಾಧ್ಯಮ ಕಾವ್ಯವೇ. ಅದ್ದುದರಿಂದ ಆ ಪ್ರಕಾರಕ್ಕೆ ವಿಶೇಷ ಏಕಾಗ್ರತೆ ಹರಿತ ಬಹುಮುಖ ಚಲನೆ, ಸಂಕೀರ್ಣತೆ

ಪ್ರಾಪ್ತವಾಗಿದೆ. ಇವುಗಳ ಜೊತೆಗೆ ರೂಪಕ ಪ್ರತಿಮೆಗಳ ಪರಸ್ಪರ ಜೋಡಣೆಗೊಂಡು ಬೇಂದ್ರೆ ಕಾವ್ಯಕ್ಕೆ ಸ್ವಂತಿಕೆಯನ್ನು ತಂದು ಕೊಡುತ್ತವೆ. ಇಷ್ಟೆಲ್ಲವುಗಳ ಜೊತೆಗೆ ಬೇಂದ್ರೆ ಕಾವ್ಯದ ವಿಶ್ಲೇಷಣೆ ಮುಗಿದು ಹೋಗುವುದಿಲ್ಲ ಬದಲಾಗಿ ಹೇಳಲೇಬೇಕಾಗಿರುವುದು ಹೆಚ್ಚು ಉಳಿದುಕೊಂಡು ಬಿಡುವುದೇ ಅವರ ಕಾವ್ಯದ ಲಕ್ಷಣ. ಅವರ ಕಾವ್ಯದಲ್ಲಿ ಶ್ಲೇಷೆಯು ಮೂಲಕ ಕವಿತೆಯ ಅರ್ಥದ ಇನ್ನೊಂದು ಮಗ್ಗಲನ್ನು ನಿರ್ದೇಶಿಸುವುದರೊಂದಿಗೆ ಅನುಭವದ ಬಹುಮುಖ್ಯತೆಯನ್ನು ಎತ್ತಿ ತೋರಿಸುವುದರಲ್ಲಿ ಮತ್ತು ಓದುಗನ ಸಂವೇದನೆಯನ್ನು ವಿಸ್ತರಿಸುವುದರಲ್ಲಿ ಇವು ಪ್ರಧಾನ ಪಾತ್ರ ವಹಿಸುತ್ತವೆ. ಇದು ಬದುಕಿನ ಬಗೆಗಿನ ವಿಷಾದವನ್ನು ಗಾಢಗೊಳಿಸುವುದರಲ್ಲಿ ಮತ್ತು ನೋವನ್ನು ಮರೆಸುವುದರಲ್ಲಿ ಶ್ಲೇಷೆಯನ್ನು ಪ್ರಧಾನ ಪರಿಕರವಾಗಿ ಬಳಸಲಾಗಿದೆ. 'ಮುಗ್ದೆ ಹೋದ ಬಧುವಾರ ಬರಲ್ಗೊಲ್ಲ' 'ವಿಧಿತಂದ ಓದು' ಪದ್ಯಗಳಲ್ಲಿ ಅನುಭವ ದಟ್ಟವಾಗುತ್ತದೆ.

ಇಂದ್ರಿಯ ಗ್ರಾಹ್ಯವಾಗುವಂತೆ ಅನುಭವವನ್ನು ಭಾಷೆಯಲ್ಲಿ ತೋರಿಸುವ ಗುಣ ಬೇಂದ್ರೆಕಾವ್ಯದ ಮತ್ತೊಂದು ವೈಶಿಷ್ಟತೆ. ಕುಣಿಯೋಣಬಾರ ಕುಣಿಯೋಣಬಾರ ತಾಳ್ಯಕ ತಂತ್ಯಾಕ ರಾಗದಿ ಚಿಂತ್ಯಾಕ ಹೆಜ್ಜ್ಯಾಕ ಗೆಜ್ಜ್ಯಾಕ ಕುಣಿಯೋಣಬಾರ.

ಈ ಕವಿತೆಯ ಅರ್ಥವಂತಿಕೆಯನ್ನು ಹೆಚ್ಚಿಸಲು ಆಂಗಿಕವಾಗಿ ಅಭಿನಯಿಸಲು ಒತ್ತಾಯಿಸುವ ಈ ಗುಣವನ್ನು 'Gesturs' ಎನ್ನಬಹುದು. ಈ ಪದ್ಯದಲ್ಲಿ ಕುಣಿಯುವ ಶಬ್ದಚಿತ್ರಗಳ ಮೂಲಕವೇ ಚಿತ್ರವತ್ತಾಗಿ ನರ್ತನಗೈಯುತ್ತದೆ. ಶಬ್ದವ್ಯಾಪಾರದಲ್ಲಿ ದೃಶ್ಯದ ಎಲ್ಲಾ ಅನುಭವಗಳನ್ನು ಹಿಡಿಯುವ ಕೌಶಲ್ಯತೆ ಎಲ್ಲರಿಗೂ ಸಾಧ್ಯವಿಲ್ಲ. ಸಾಧ್ಯವಾದರೂ ಸಹಜವಾಗಿ ಪದ್ಯದ ಸಾಲುಗಳಾಗಿ ಅನುಭವದ ಮೀಮಾಂಸೆಯಾಗಿ ತೋರಬಲ್ಲ ಶಕ್ತಿ ಬೇಂದ್ರೆಯವರ ಭಾಷೆಯಲ್ಲಿದೆ. ಕವಿತೆಯೊಳಗಿನ ಇಂಥ ಅಪೂರ್ವ ನಾಟಕೀಯತೆಯನ್ನು ಹೊರತುಪಡಿಸಿ ಓದಿದರೆ ಅಂಥ ಕವಿತೆಗಳು ಸಾಮಾನ್ಯ ಕವಿತೆಗಳಾಗಿ ಕಾಣಿಸಿದರೆ ಅಶ್ಚರ್ಯವಿಲ್ಲ. 'ಮನದನ್ನೆ' 'ನೀ ಹಿಂಗ ನೋಡಬ್ಯಾಡ ನನ್ನ', 'ಚೆಲುವ', 'ಹುಬ್ಬಳ್ಳಿಯಾಂವ' ಕವಿತೆಗಳನ್ನು ನಿದರ್ಶನವಾಗಿ ನೋಡಬಹುದು. ಅನುಭವದ ಏಕಮುಖನೋಟವನ್ನು ಕಾಣುವ ಅಥವಾ ಅದನ್ನೆ ಸತ್ಯವೆಂದು ಭ್ರಮಿಸುವ ಅಪ್ರಬುದ್ದತೆಯನ್ನು ಕವಿ ಸಂವೇದನೆ ವಿಮರ್ಶಿಸುತ್ತದೆ. ಹಾಗೆ ನೋಡಿದರೆ ಪ್ರೀತಿ, ಸ್ವಾತ್ವಿಕಭಾವ ಎನ್ನುವುದು ಸಾರ್ವತ್ರಿಕ ಗ್ರಹಿಕೆ ಆದರೆ ಅದು ರೌದ್ರನೃತ್ಯ ಕೂಡ ಆಗಬಲ್ಲದು 'ಪ್ರೀತಿ ಮರ್ತ್ಯದ್ದೇ ಹೊರೆತು ಕೈಲಾಸದಲ್ಲ' ಎಂಬ ನಂಬಿಕೆಯನ್ನು ಬೇಂದ್ರೆಯವರ ಪ್ರೀತಿಯಂಥ ಕವನಗಳನ್ನು ರೂಪಿಸುವಾಗ ಇದಕ್ಕೆ ಹೊಂದಿಕೊಳ್ಳುವ ಭಾಷೆಯ ಮಟ್ಟುಗಳನ್ನು, ಪಟ್ಟುಗಳನ್ನು ಕಾಣಿಸುತ್ತಾರೆ. ಬೇಂದ್ರೆಯವರು ಬರೆದ ಎಷ್ಟೋ ಜನಪದ ಶೈಲಿಯ ಕವನಗಳು ಅಯಶಸ್ವಿಯಾಗಿರುವುದುಂಟು. ಆದರೆ ಅದಕ್ಕಿಂತ ಹೆಚ್ಚಿಗೆ ಯಶಸ್ವಿಯಾಗಿರುವ ಕವನಗಳು ಹೇರಳವಾಗಿ ಕಂಡುಬರುತ್ತವೆ. ಅಷ್ಟೇ ಅಲ್ಲದೆ ಸಹೃದಯನ ಮಾನಸದಲ್ಲಿ ಸದಾ ಗುನುಗುಡುತ್ತಲೇ ಇರುವುದು ಪದ್ಯದ ಊರ್ಧ್ವಾ ಕಾವ್ಯಶಕ್ತಿಗೆ ಇರುವ ಗುಣ ಎನ್ನದೆ ಬೇರೆ ಏನೆನ್ನಲು ಸಾಧ್ಯ. 'ನೀ ಹಿಂಗ ನೋಡಬ್ಯಾಡ ನನ್ನ' 'ನನ್ನ ಕೈಹಿಡಿದಾಕೆ' 'ರಾಗರತಿ' ಕವನಗಳಲ್ಲಿ ಭಾಷೆಯ ಭಾವವೇಗ ಅತಿಯಾಗಿಯೇ ಕಡಿಮೆಯಾಗಿಯೇ ಬೇಕಾದ ರಸಸಿದ್ಧಿ ಆಗಿದೆ. ಕುರ್ತು ಕೋಟಿಯವರ ಈ ಮಾತನ್ನು ಸಂಪೂರ್ಣವಾಗಿ ಒಪ್ಪಬೇಕಾಗಿಲ್ಲ[1].



[1]ನಾದ ಲೀಲೆ ಪುಟ ೩೦

## ಬೇಂದ್ರೆಕಾವ್ಯದಲ್ಲಿ ಜನಪದ ಮೋಡಿ

ಕನ್ನಡ ಕಾವ್ಯಪರಂಪರೆಯಲ್ಲಿ ಮಾರ್ಗ, ದೇಸಿ, ಎಂಬ ಎರಡು ಬರವಣಿಗೆಯ ಕ್ರಮಗಳು ಹಾಗೂ ಮನೋಧರ್ಮಗಳು ಗುರ್ತಿಸಲ್ಪಟ್ಟಿವೆ. ಮಾರ್ಗವೆಂದರೆ ಪ್ರೌಢಭಾಷೆಯಲ್ಲಿ ಗಂಭೀರವಾಗಿ ಬಹುಮಟ್ಟಿಗೆ ಪರಂಪರೆಯಲ್ಲಿ ಸಿದ್ಧ ಪ್ರಸಿದ್ಧ ವಸ್ತುಗಳನ್ನು ನಿರ್ವಹಿಸುವ ಕೃತಿಗಳನ್ನುಳ್ಳದ್ದು ದೇಸಿಯೆಂದರೆ ಪ್ರಾದೇಶಿಕವೂ ಜನಪದೀಯವು ಜನಪದ ಮಾತಿನ ರೀತಿಯನ್ನು ಬಳಸುವ ಕೃತಿಯನ್ನುಳ್ಳದ್ದು ಎಂದು ಹೇಳಬಹುದು. ಉದಾಹರಣೆ ಪಂಪ, ರನ್ನ, ರುದ್ರಭಟ್ಟ ಇವರು ಮಾರ್ಗಕವಿಗಳು ಅಲ್ಲದೆ ದೇಸಿ ಪರಂಪರೆಗೆ ಸೇರಿದ ಕುಮಾರವ್ಯಾಸ, ವಚನಕಾರರು, ಹರಿದಾಸರು, ರತ್ನಾಕರವರ್ಣಿ, ಸರ್ವಜ್ಞ ಮತ್ತು ಹಳ್ಳಿ ಹಾಡುಗಳನ್ನು ಬರೆದ ಜನಪದ ಗಾಯಕರು ಮತ್ತು ತತ್ವಪದಕಾರರು ಜೊತೆಗೆ ಬೇಂದ್ರೆಯ ಸಾಹಿತ್ಯದ ಬೇರುಗಳನ್ನು ಗುರ್ತಿಸಲು ಪ್ರಯತ್ನಿಸುವುದು ವ್ಯರ್ಥ. ಬೇಂದ್ರೆ ಕಾವ್ಯದಲ್ಲಿ ಆ ಸಂಬಂಧ ಬೇರೊಂದು ಮಜಲಿನ ರೂಪದಲ್ಲಿ ಹಾಯ್ದು ಹೋಗಬಹುದು. ಈ ಪರಂಪರೆಯ ಈ ಶತಮಾನದ ಹಲಸಂಗಿ ಮಧುರ ಚೆನ್ನಗೆಳೆಯರ ಗುಂಪಿನವರು ಸಿದ್ದ ಪಡಿಸಿದ ಗರತಿಹಾಡು ಜೀವನ ಸಂಗೀತ ಎಂಬ ಎರಡು ಮೊದಲ ಜನಪದ ಗೀತೆಗಳ ಸಂಗ್ರಹದೊಡನೆ ಬೇಂದ್ರೆವರಿಗಿದ್ದು ಆತ್ಮೀಯ ಸಂಬಂಧವು ಸಾಂಸ್ಕೃತಿಕ ಪುನರ್ ಉದ್ಧಾರದ ದೃಷ್ಟಿಯಲ್ಲಿ ಮಹತ್ವಾಗಿರುವುದರಿಂದ ಜೋತೆಗೆ ಬೇಂದ್ರೆಯವರ ಕಾವ್ಯ ದೃಷ್ಟಿಯಿಂದಲೂ ಅಷ್ಟೇ ಮಹತ್ವದ್ದಾಗಿತ್ತು.

ಶಾಂತ ಕವಿ ಸಕ್ಕಂ ಕಾವ್ಯನಂದಾ ಝುರಿ
ಲಾವಣಿ ಸಾಂಗತ್ಯ ಹುಡುಕಾಡಿದೆ
ಕೋಲು ಹಾಡುಗಳನ್ನು ಹಾಡಿಸಿ ದಣಿಸಿದೆ
ಅಂಬಿಕೆಯ ನಂಬಿಕೆಯನಾ ಕಾಡಿದೆ

(ಸಖೀಗೀತ ೧೯೩೭)

ಅಲ್ಲದೆ: ದಾಸರ ಪದಗಳು ಪುರಾಣ ವಾಚನ
ಪಾರಿಜಾತ ಪದ ಹಾಡು ಹಗಲಿರುಳು
ಅಲ್ಲದೆ: ಹಾಡು ಹಾಡುವುದೇ ಚಟವಾಗಿ
ಹಾಳಿ ಹಡಗಕ್ಕಾಗಿ
ಗಾಳಿ ಪಟವಾಗಿ ವರಿಸಿದ್ದೆ
ಎಂದು ಹೇಳಿಕೊಂಡಿದ್ದಾರೆ
ಛಂದೋಗತಿಯ ಛಂದ ತಾಳಲಯಾನಂದ
ಸ್ವಚ್ಛಂಧ ಬಂಧವ ಕಲಿಸಿದವು
ನಾಡ ಬಳಕೆಯ ನುಡಿಗೆ ಸೋತಿದ್ದೆ ಮನವನ್ನುಹಾಡಿನ ಮೋಡಿಗೆ ಒಲಿಸಿದ್ದವು

-ಎನ್ನುತ್ತಾರೆ

ಈ ದೇಸಿ ಜಾನಪದ ಸತ್ವದೊಂದಿದೆ ಬೆಸೆದು ಕೊಂಡಿದ್ದರಿಂದಲೇ ಬೇಂದ್ರೆ ಬಳಕೆಯ ನುಡಿಯನ್ನು ಹೇರಳವಾಗಿ ದಕ್ಕಿಸಿಕೊಂಡಿರುವುದು ಕಂಡುಬರುತ್ತದೆ.

ಜಾನಪದೀಯ ಗುಣವುಳ್ಳ ನಾಟಕೀಯತೆಯ ಜೊತೆಗೆ ಗ್ರಾಮ್ಯದ ಹಾಡು, ಕುಣಿತ, ಅಭಿನಯುಗಳನ್ನು ಪದ್ಯ ಕಟ್ಟುವ ಮೂಲಕ ಅದೇ ಭಾಷೆಯ ಬಳಕೆಯೊಂದಿಗೆ ಸಶಕ್ತವಾಗಿ ದುಡಿಸಿಕೊಂಡಿರುವುದನ್ನು 'ನಾದಲೀಲೆ' ಎಂಬ ಪದ್ಯದ ಸಾಲುಗಳಿಂದ ಮನಗಾಣಬಹುದು.

ಕೋಲು ಸಖೀ ಚಂದ್ರಮುಖಿ ಕೋಲೆ ನಾದಲೀಲೆ ॥ಪ॥
ಮುಂಜಾವದ ಎಲರ ಮೂಸಿ ನೋಡುತಿಹವೆ ನಲ್ಲೆ
ತರಳ ಎರಳ ಚಿಗುರ ಚಿಗುರೆ ಹೂವು ಹೂವು ಹುಲ್ಲೆ
ಕಂಗೋಳಿಸುವ ಕೆಂಪುಮಂದೆ ಕಂಗೆಡಿಸುವ ಮಂಜುಹಿಂದೆ
ಅತ್ತಣಿಂದ ಬೇಟಗಾರ ಬರುವ ನಾನು ಬಲ್ಲೆ
ಮುಂಜಾವದ ಎಲ್ಲರ ಮೂಸಿ ನೂಡುತಿಹವೆ ನಲ್ಲೆ
ಕೋಲು ಸಖಿ..................

ಈ ಮಾದರಿಯ ಪರಂಪರಾಗತ ರೂಪಗಳನ್ನು ಬೇಂದ್ರೆ ಅನುಸರಿಸಿದ್ದರೂ ಆ ಮಾದರಿಗಳನ್ನು ಮುರಿದು ಹೊಸ ಕಾಲಮಾನದ ಚೈತನ್ಯಕ್ಕೆ ಹೊಂದುವಂತೆ ದುಡಿಸಿಕೊಂಡಿದ್ದಾರೆ.

ಅನೇಕ ಕವಿಗಳು ಪ್ರಾಸಕ್ಕಾಗಿ, ನಾದಕ್ಕಾಗಿ, ಒದ್ದಾಡಿದರೆ ಬೇಂದ್ರೆಯವರಿಗೆ ಅದು ಸಹಜ ಅವರ ಭಾವಗೀತೆಗಳಲ್ಲಿ ಮತ್ತು ಕಾವ್ಯಗಳಲ್ಲಿ ಜನಪದ ಮೋಡಿಯು ಪ್ರಧಾನ ಲಕ್ಷಣಗಳಲೊಂದು ಜನಪದ ಮೋಡಿಯಾಗಿದೆ ಎಂದರೆ ತಪ್ಪಾಗಲಾರದು.

### ಬೇಂದ್ರೆ ಕಾವ್ಯದಲ್ಲಿ ಪ್ರಾಸ.

ಬೇಂದ್ರೆಯವರ ಕಾವ್ಯದಲ್ಲಿ ಪ್ರಾಸಗಳು ಎಷ್ಟು ಸಹಜವಾಗಿ ಬರುತ್ತದೆ ಎಂದರೆ ಅವುಗಳನ್ನು ಓದುತ್ತಿದ್ದರೆ ಅವುಗಳು ಬೇಂದ್ರೆ ಕಟ್ಟಲಿಲ್ಲ ಬೇಂದ್ರೆಯನ್ನು ಕಟ್ಟಿದವು ಎನಿಸುತ್ತದೆ. ಹಳ್ಳಿಯ ಜನಪದ ಸಾಹಿತ್ಯದಲ್ಲಿ ಪ್ರಾಸದ ಮಹತ್ವ ಹೆಚ್ಚು ಒಂದು ಗಾದೆಯನ್ನು ಹೇಳುವಾಗಲೂ ಒಂದು ಒಗಟನ್ನು ನುಡಿಯುವಾಗಲೂ ಅನ್ನವಾಗಲು ಪ್ರಾಸವೈಭವವನ್ನು ಕಾಣುತ್ತವೆ. ಜಾನಪದ ಮೋಡಿಗೆ ಬೇಂದ್ರೆ ಮಾರುಹೋಗಿದ್ದರು. ಪ್ರಾಸದಲ್ಲಿ ಕವಿ ಏನು ಅದ್ಭುತವನ್ನು ಸಾಧಿಸಬಹುದು ಎಂಬುಂದಕ್ಕೆ ಬೇಂದ್ರೆಯವರ 'ಕಥೆಯಾದಳು ಹುಡುಗಿ' ಎಂಬ ಶ್ರೇಷ್ಠ ಕವನ ಇದಕ್ಕೆ ನಿದರ್ಶನವಾಗಿದೆ.

ಹಸಿಯಾದಳು ಬಿಸಿಯಾದಳು
ಸಸಿಯಿದ್ದಾ ಹುಡುಗಿ
ಹುಸಿಯರಿಯದ ಹುಡುಗಿ
ಕಣ್ಣೆದಿರಲ್ಲೇ ಬೆಳದಳು
ಹೊಸ ದೇಸಿಯ ಬೆಡಗಿ

ಸೊಸೆಯಿದ್ದಳು ಚಿಗುರಿಟ್ಟಳು
ಉಗುರ್ಗಂಪಿನ ಹುಡುಗಿ
ಉಸಿರ್ಗಂಪಿನ ಹುಡುಗಿ
ಆಡುತ ನೋಡುತ ಬಿಟ್ಟಳು
ಊರೆಲ್ಲವನುಡುಗಿ
ಚಿಗುರಿದ್ದಳು ಚಿಗುರೆಯಮರಿ
ಹೂಬಿಟ್ಟಳು ಹುಡುಗಿ
ಮೊಗ್ಗಿದ್ದಾ ಹುಡುಗಿ
ಕುಣ್ಕುಣಿತಕೆ ನಗೆ ಭಣಿತಕ್ಕೆ
ಮನೆ ಹೋಯಿತು ನಡುಗಿ
ಹಾಹಾ ಎನ್ನುತ ಬೆಳೆದಳು
ಕೂಸೆನಿಸಿದ ಹುಡುಗಿ
ವಧುವಾದಳು ಹುಡುಗಿ
ಒಗರಳಿದಿತು ಹುಳಿಯಿಳಿದಿತು
ಬೆಡಗುಳಿದಿತು ಅಡಗಿ
ಅಪಾಕವೊ ಆ ಪಾಡೋ
ಕಾಯಾದಳು ಹುಡುಗಿ
ಹಾಯಾದಳು ಹುಡುಗಿ
ಪಡೆದಷ್ಟು ಹಿಗ್ಗಿವಳಿಗೆ
ಮಮತೆಯ ಕಂಪಿಡುಗಿ
ಪಾಡಾದಳು ಹಣ್ಣಾದಳು
ಮಣ್ಣಾದಳು ಹುಡುಗಿ
ನೆನಪದಾಳು ಹುಡುಗಿ
ವ್ಯಥೆಯಾದಳು ಕಥೆಯಾದಳು
ಎದೆಯಲ್ಲಿಯೇ ಮಡಗಿ

ಇಲ್ಲಿ 'ಹುಡುಗಿ' ಎಂಬ ಮಾತಿಗೆ ಪರ್ಯಾಯವಾಗಿ ಪ್ರಾಸಪದಗಳಾಗಿ ಬೆಡಗಿ, ಹುಡುಗಿ, ನಡುಗಿ, ಅಡಗಿ, ಮಡಗಿ, ಎಂಬ ಪ್ರಯೋಗಗಳನ್ನು ಸೇರಿ ಕಾವ್ಯದ ಲಯವನ್ನು ಚಂದ ಕಾಣಿಸುವಂತಾಗಿದೆ. ಹಾಗೆಯ ಶಶಿ ಬಿಸಿ ಹಣ್ಣಾದಳು, ಮಣ್ಣಾದಳು, ತಾಯಾದಳು, ವ್ಯಥೆಯಾದಳು ಕಥೆಯಾದಳು ಎಂಬ ಒಳ ಪ್ರಾಸಗಳು ಹುಡುಗಿಯ ಆಕೆಯ ಬೆಳವಣಿಗೆಯಲ್ಲಿ ಅತ್ಯಂತ ಅರ್ಥಪೂರ್ಣವಾದ ಕ್ರಿಯಾಸಂಮಿಳಿತಗೊಳ್ಳಲು ಸಹಕಾರಿಯಾಗಿದೆ.

ಸುರಸ್ವಪ್ನವಿದ್ದ ಪ್ರತಿಬಿಂಬ ಬಿದ್ದ
ಉದ್ಬುದ್ಧ ಶುದ್ಧ ನೀರೇ
ಎಚ್ಚತ್ತು ಎದ್ದ ಆಕಾಶದುದ್ದ
ಧರೆಗಳಿಯಲಿದ್ದ ದೀರೇ
ಸಿರಿವಾರಿಜಾತ ವರ ಪಾರಿಜಾತ
ತಾರ ಕುಸುಮದಿಂದೆ
ವೃಂದಾರವಂದ್ಯೆ ಮಂದಾರ ಗಂಧೆ
ನೀನೆ ತಾಯಿ ತಂದೆ
ರಸ ಪೂರಜನ್ಯೆ ನೀನಲ್ಲ ಅನ್ಯೆ
ಸಚ್ಚಿದಾನಂದ ಕನ್ಯೆ
..................
ಈ ಅದ ಪಾತವನ್ನೆ
ಹರಿಕೆ ಸಂದಂತೆ
ಮಮತೆ ಮಿಂದಂತೆ
ತುಂಬಿ ಬಂದಂತೆ
ದಮ್ ದಮ್ ಎಂದಂತೆ
ದುಡುಕಿ ಬಾ ನಿನ್ನ ಕಂದನ್ನ ಹುಡುಕಿ ಬಾ[೧]

ಕನ್ನಡ ಕಾವ್ಯಕ್ಕೆ ಬೇಂದ್ರೆ ಕೊಟ್ಟ ಇನ್ನೊಂದು ಬೆಲೆಬಾಳುವ ರೀತಿ ಅವರು ಕಾಳಿದಾಸನ 'ಮೇಘಸಂದೇಶ' ವನ್ನು ಕನ್ನಡಕ್ಕೆ 'ಭಾವಗ್ರಹಣ' ಮಾಡಿಕೊಟ್ಟದ್ದರಲ್ಲಿ ನೋಡಬಹುದು ಇದು ಜನಪದ ರೀತಿ ವಿರಹ ಚಿತ್ರಣಕ್ಕೆ ಅತ್ಯಂತ ಔಚಿತ್ಯ ಪೂರ್ಣ ಉದಾಹರಣೆಯಾಗಿದೆ.

ಜಲದ ಭಾರದಲ್ಲಿ ಜಲದ ಬಾನಿನಲ್ಲಿ ಮಂದ ಮಂದವಾಗಿ
ಗಾಳಿಯಿಂದ ಆಕ್ರಾಂತನಾಗಿ ಗುಡುಗುಡುಗಿ ದೂಡಿನೂಗಿ
ನದಿಗಾಗಿ ಬೆಟ್ಟಕ್ಕೆ ತಡೆದು ನಗರಿಯಲಿ ಮೊದವಡೆದು
ಸಾಗುತಿಹುದು ಮಂದ್ರಾಕಾಂತ ರಸ ವಿರಹ ಛಂದಹಿಡಿದು.

ಕಳೆದವೆಷ್ಟು ಇನ್ನುಳಿದವೆಷ್ಟು ದಿನವೆಂದು ಲೆಕ್ಕವಿಟ್ಟು
ಹೊಸ್ತಿಲಕ್ಕೆ ಹೂವಿಟ್ಟು ನೋಡುವಳೊ ನಾನುಹೊದ ತೊಟ್ಟು
ಇಲ್ಲ ಎದೆಯ ಮುಟ್ಟಿಳಿದ ಮೊದಲ ಸಂಗಗಳ ಸವಿವಳೇನೋ
ನಲ್ಲರಗಲೆ ನಲ್ಲೆಯರಿಗೆಲ್ಲ ಇವು ಆಟ ಇಷ್ಟೆತಾನೋ?[೨]



೧ ಗಂಗಾವತರಣ ಪುಟ ೬ ಮತ್ತು ೭
೨ ಕನ್ನಡ ಮೇಘದೂತ

ಇಲ್ಲೆಲ್ಲ ನಮ್ಮ ದೇಶದ ಜಾನಪದ ಜೀವನ ಈ ಕನ್ನಡದ ಮಂದಾಕ್ರಾಂತದ ಜತೆಗೆ ಕೈಹಿಡಿದು ಸವಾರಿ ಹೊರಟಿರುವುದನ್ನು ಕಾಣಬಹುದು. ಈ ಭಾಷಾಂತರ ಮೂಲಕ್ಕೆ ಸರಿಯಾಗಿಲ್ಲ ಎಂಬ ಮಾತಿದೆ ಹಾಗೇ ಮಾಡುವುದು ಕವಿಯ ಉದ್ದೇಶವಲ್ಲ ಆಗೆ ಮಾಡಿದರೇ ಆ ಮಹಾಕವಿಯ ಸೃಷ್ಟಿ ಈ ಮಹಾ ಕವಿಯಲ್ಲಿ ಮರುಹುಟ್ಟನ್ನು ಅಥವಾ ಮರುಸೃಷ್ಟಿಯನ್ನು ಪಡೆದಿದೆ.

ಬೇಂದ್ರೆಯವರ ಮತ್ತೊಂದು ಭಾಷಾ ವೈವಿಧ್ಯವೆಂದರೆ ದ್ರಾವಿಡ ಭಾಷೆಗಳಲ್ಲಿ ಬಳಕೆಯಾಗುತ್ತಿದ್ದ ವಿಶೇಷತ ತೆಲುಗಿನಲ್ಲಿ ಬಳಕೆಯಾಗುತ್ತಿದ್ದ ಸೀಸ ಪದ್ಯದ ಬಳಕೆ ಹೊಸಗನ್ನಡದಲ್ಲಿ ತೀರ ಕಡಿಮೆ ಸೀಸಪದ್ಯ ಬೇಂದ್ರೆ ಹೊಸಗನ್ನಡಕ್ಕೆ ನೀಡಿದ ಕಾಣಿಕೆಯಾಗಿದೆ. ಗುಣದಲ್ಲಿ ಗಾತ್ರದಲ್ಲಿ ಇವರ ಸೀಸ ಪದ್ಯಗಳಿಗೆ ವಿಶೇಷ ಸ್ಥಾನವಿದೆ, ಅವರ 'ಉಯ್ಯಾಲೆ' ಕವನ ಸಂಗ್ರಹದಲ್ಲಿ ಒಂದು ಭಾಗವೇ ಸೀಸ ಪದ್ಯಕ್ಕೆ ಮೀಸಲಾಗಿರುವುದನ್ನು ಗಮನಿಸಬಹುದು.

ಈ ಸಂಬಂಧ'ದಲ್ಲಿ ಉಯ್ಯಾಲೆಯು ಪೀಠಿಕೆಯಲ್ಲಿ ಕವಿಯೇ ಹೇಳಿದ ಮಾತುಗಳು ಗಮನಾರ್ಹವಾಗಿವೆ. ನಾನು ಬರೆದ ಸೀಸ ಪದ್ಯಗಳು ಲಕ್ಷಣ ಬದ್ಧ ಸೀಸ ಪದ್ಯಗಳಲ್ಲ ಮೂಲ ಸೀಸ ಪದ್ಯವು ದ್ರಾವಿಡ ಮಾರ್ಗದ ಗಣವೃತ್ತವಾಗಿವೆ. ನನ್ನದೇಶ ಶುದ್ಧ ಮಾತ್ರ ವೃತ್ತ ಮಾತ್ರಗಣಬದ್ಧವಾಗಿದೆ ಕೊನೆಯ ನಾಲ್ಕು ಕಿರಿಯ ಸಾಲುಗಳು ಮಾತ್ರೆಗಳಲ್ಲಿ ಹೆಚ್ಚು ಕಡಿಮೆಯಾಗುವುದು ಒಂದು ವಿಧದ ಪ್ರಾಸರಚನೆಯಿದೆ ರಚಿಸಿದ್ದೆನೆ. ಅಷ್ಟ ಪಟ್ಟದಿಯೇ ಆಗಲೀ ನನ್ನ ಬಗೆಯನ್ನು ಹೊನ್ನನುಡಿಯಲ್ಲಿ ಕುಂದಣಿಸುವ ಪ್ರಯತ್ನವು ಕಲ್ಲಿನಲ್ಲೂ ಕಲ್ಪನೆಯ ಅಂದವನ್ನು ಕಂಡುರಿಸುವ ರೂಪಾರಿ ಬಗೆಯ ಸಾಹಸವು ಎಂದಿದ್ದಾರೆ. ಇವರ ಭಾಷಾ ವೈವಿಧ್ಯಕ್ಕೆ ಮತ್ತೊಂದು ಸಾಕ್ಷಿ ಬೇಂದ್ರೆ ಕಾವ್ಯದಲ್ಲಿ ಆತ್ಮೀಯವಾದ ಬರವಣಿಗೆಯ ಶೈಲಿಗೆ ನಾಂದಿಯಾಗುವ ಪರಿಯನ್ನು ಕಾಣಬಹುದು.

ಗಮು ಗಮಾಡಸ್ತಾವ ಮಲ್ಲಿಗೆ
ನೀ ಹೊರಟಿದ್ದೀಗ ಎಲ್ಲಿಗೆ
ಚಿಕ್ಕ ತೋರಸ್ತಾವ ಚಾಚಿ ಬೆರಳ
ಚಂದ್ರಾಮ ಕನ್ನಡೀ ಹರಳ !

ನೆರಳಲ್ಲಾಡತಾವ ಮರದ ಬುಡಕ್ಕ
ಕೆರೆ ತೆರಿ ನೊಗತಾವ ದಡ್ಡಕ
ಹಿಂಗ ಬಿಟ್ಟು ಇಲ್ಲಿ ನನ್ನ ನಡ್ಕಕ
ನೀವು ಹೊರಟೀದ್ದೀಗ ಎಲ್ಲಿಗೆ"

'ಗಮುಗಮಾಡಸ್ತಾವ ಮಲ್ಲಿಗೆ' ಎಂಬ ಜನಪದ ವಸ್ತುವಿನ ಕವನದಲ್ಲಿ ಚಿಕ್ಕಿಗಳಿವೆ ಚಂದ್ರ ಮೂಡಿದ್ದಾನೆ. ಮಲ್ಲಿಗೆ ಅರಳಿ ಗಮುಗಮುಸುವಾಸನೆ ಚೆಲ್ಲುತ್ತಿವೆ ಇಂಥ ಸಮುಹೂರ್ತದಲ್ಲಿ ಎಲ್ಲಿಗೆ ಹೊರಟಿರುವೆ ಎಂಬ ಪ್ರಿಯೆಯ ಚಿತ್ರ ಚಂದವಾಗಿಸಲು ಬಳಸುವ ದೇಸಿ ಪದಗಳು ಯಥೇಚ್ಛವಾಗಿ ಪದ್ಯದ ತುಂಬ ಕಾಣಸಿಗುತ್ತವೆ.

ಈ ಎಲ್ಲಾ ವಿಚಾರಗಳ ಹಿನ್ನಲೆಯಲ್ಲಿ ಕೆಲವು ಕವನಗಳನ್ನು ಗಮನಿಸಬಹುದು. 'ಮನದನ್ನೆ' ಕವನದಲ್ಲಿ ಸಂವಾದಕ್ಕಿಂತ ವಾದವ ಹಾದಿಹಿಡಿದ ದಂಪತಿಗಳನ್ನು ಕಾಣುತ್ತೇವೆ. ಸಂಸಾರದಲ್ಲಿ ಸಮಗ್ರ ಸಾಮರಸ್ಯ ಹುಟ್ಟಬೇಕು ಎಂಬುದು ಕವಿಯ ನಿಲುವು. 'ಆಡದಿರು ಮನದನ್ನೆ ಎನಗೆ ಎದಿರಾಡದಿರು' ಎಂಬ ಆರಂಭವೇ ಸಂಸಾರದಲ್ಲಿ ವಿರಸವನ್ನು ತಂದಿರುವ ಹೆಂಡತಿಯನ್ನು ಕುರಿತ ಗಂಡನ ಮಾತಿನ ಚಿತ್ರವನ್ನು ಕಣ್ಮುಂದೆ ತರುತ್ತದೆ. ವಾದಕ್ಕೆ ಬೇಸತ್ತಿರುವ ಅವನ ಮಾತುಗಳು ಕರಣಾಜನಕವಾಗಿವೆ. ಹೀಗೆನಲು 'ಹಾಗೆಂದು ಬೆಂದ ಹೆಣವನೆ ಕೊಂದು ಭೂತಲೀಲೆಯಲೀಗ ತೊಡಗಬೇಡ'. 'ಇದಿರಾಡದಿರು ಗೆಳತಿ ನೀನು ಕೂಡ ಹೃದಯವನು ರಣರಂಗ ಮಾಡಬೇಡ ಎನ್ನುತ್ತಾನೆ'. ನೀನು ಕೂಡ ಎನ್ನುವಲ್ಲಿ ಗಂಡನ ಜೀವನಕ್ಕೆ ಸ್ಫೂರ್ತಿಯ ಸೆಲೆಯಾಗಬೇಕಾದ ಹೆಂಡತಿಯೇ ಸಹಕರಿಸದಿದ್ದರೆ ಹೇಗೆ ಎಂಬ ಭಾವವಿದೆ. ಆರಂಭದ ತೀವ್ರತೆಯನ್ನು ಕವನ ಕೊನೆಯವರೆಗೆ ಉಳಿಸಿಕೊಳ್ಳುತ್ತದೆ.

"ವಾದಕ್ಕೆ ಪ್ರತಿವಾದ
ಸಾಕು ವಾದ ವಿವಾದ
ಜೀವ ಸಂವಾದಕ್ಕೆ ಹಸಿದು ಬಂದೆ
ನೀಡು ಸಿಪ್ಪೆಯ ಸುಲಿದು ತಿಳಲನೊಂದೆ"

'ಜೀವ ಸಂವಾದ' ಎಂಬ ಶಬ್ದದಲ್ಲಿ ಈ ಕವನದ ಸಂದೇಶವೆಲ್ಲ ಅಡಕವಾಗಿದೆ. ತೋಳ ತೊಟ್ಟಿಲ ಮಗುವು ಆಗಿ ಬಂದೆ. 'ಗೊಂಬೆಯಾಡಿಸಿದಂತೆ ಆಡಿಸೆಂದೆ' ಎನ್ನುವಲ್ಲಿ ಹೆಂಡತಿ ಗಂಡನ ಜೀವನದಲ್ಲಿ ತಾಯ್ತನದ ಸೈರಣೆಯಿಂದ ತಾಳ್ಮೆಯಿಂದ, ಕರುಣೆಯಿಂದ ನಿರ್ವಹಿಸಬೇಕಾದ ಕರ್ತವ್ಯದ ಎಚ್ಚರವಿದೆ. ಸ್ವರ್ಗ ನರಕಕ್ಕೆ ಕರೆದಲ್ಲಿ ಬರುವೆ ಎನ್ನುವಲ್ಲಿನ ಶರಣಾಗತಿ ಕೊನೆಯ ಹಂತ ಮುಟ್ಟುತ್ತದೆ. ಆದರೆ ಈ ಶರಣಾಗತಿಯ ಉದ್ದೇಶವೇ ಸಾಮರಸ್ಯವೇ ಜೀವನ ಎಂಬುದನ್ನು ಸಾಧಿಸುವುದೇ ಆಗಿದೆ. 'ಮಾಡದಿರು ಬಾಳನ್ನು ಬೆಳೆಯಂತೆ ಕೂಡಿರಲಿ ಬಾಳು ಇಡಿಗಾಳಿಯಂತೆ' ಎಂಬುವಲ್ಲಿ ಈ ಭಾವವನ್ನು ಕಾಣುತ್ತೇವೆ. 'ಹೊಸಹುಟ್ಟು ಬರುವುದಿದೆ, ಇನ್ನು ಮುಂದೆ ಆಗೋಣ ಈ ಜಗದ ತಾಯಿ ತಂದೆ' ಎಂಬ ಕೊನೆಯ ಪಂಕ್ತಿಗಳಲ್ಲಿ ತಾಯಿ ತಂದೆಯಾಗಿ ಹೊರಬೇಕಾದ ಜವಾಬ್ದಾರಿಯ ಪ್ರಜ್ಞೆಯನ್ನು ಆಶಾವಾದದ ಮೂಲಕ ಸೊಗಸಾಗಿ ಅಭಿವ್ಯಕ್ತಗೊಳಿಸಿದ್ದಾರೆ. ಕವನ ಸಾಕಷ್ಟು ಧೀರ್ಘವಾದರೂ ಭಾವದ ತೀವ್ರತೆ ಮತ್ತು ನಾಟಕೀಯಗುಣ ಅದನ್ನು ಮರೆಸುತ್ತದೆ. ಇದು ಬೇಂದ್ರೆಯವರ ಭಾಷೆಯ ವೈವಿಧ್ಯತೆಯನ್ನು ತೋರುತ್ತದೆ.

ಬೇಂದ್ರೆಯವರ ಪ್ರಮುಖ ಕವನಗಳಲ್ಲಿ 'ಬಿಸಿಲುಗುದುರೆ'. ಮದುವೆಯಾದ ಮೊದಲ ದಿನಗಳಲ್ಲಿ ಇದ್ದ ಉತ್ಸಾಹ, ಆಸೆ, ಮುಂದೆ ಕಡಿಮೆಯಾಗುತ್ತದೆ. ಇದು ಒಪ್ಪಿಕೊಳ್ಳಬೇಕಾದ ವಾಸ್ತವ. ಬಿಸಿಲುಗುದುರೆಯಲ್ಲಿನ ಯುವಕ ತನ್ನ ಚೆನ್ನಿಯನ್ನು ಮೊದಲ ಬಾರಿ ಕಂಡಾಗ ಮುಂಗಾರಿನ ಕಣ್ಣು ಸನ್ನೆಯ ಮಿಂಚಿನಂತಿದ್ದ ಅವಳ ನಗೆ ಇಂದು ಬಿಸಿಲುಗುದುರೆ ಏರಿ ಸವಾರಿ ಹೊರಟಿರುವುದನ್ನು ಕಂಡು ಮರುಗುತ್ತಾನೆ.

ಹಳ್ಳದ ದಂಡ್ಯಾಗ ಮೊದಲಿಗೆಕಂಡ್ಯಾಗ
ಏನೊಂದು ನಗೀ ಇತ್ತ
ಏನೊಂದು ನಗಿ ಇತ್ತ ಏಸೊಂದು ನಗೀ ಇತ್ತ
ಏರಿಕಿ ನಗಿ ಇತ್ತ
ನಕ್ಕೊಮ್ಮೆ ಹೇಳ ಚೆನ್ನಿ ಆ ನಗಿ ಇತ್ತಿತ್ತ
ಹೋಗೇತಿ ಎತ್ತೆತ್ತ[೧]

ಕವನದ ಆರಂಭದಲ್ಲಿ ಮಧುರ ಸ್ಮೃತಿಗಳ ಚಿತ್ರ ಸೊಗಸಾಗಿ ಮೂಡಿಬಂದಿದೆ. ಮುಂದಿನ ಪಂಕ್ತಿಗಳಲ್ಲಿ ವಾಸ್ತವದ ನಗ್ನ ಸತ್ಯದ ಚಿತ್ರ ಒಮ್ಮೆಲೆ ನಮ್ಮ ಕಣ್ಣ ಕಟ್ಟುತ್ತದೆ.

ಬಡತನದ ಬಲಿಯಾಗ ಕರುಳಿನ ಕೊಲಿಯಾಗ
ಬಾಳ್ವಿಯ ಒಲಿ ಮ್ಯಾಗ
ಸುಟ್ಟ ಹಪ್ಪಳದ್ಹಾಂಗ ಸೊರಗಿದಿ ಸೊಪ್ಹಾಂಗ
ಬಂತಂತ ಮುಪ್ಪು ಬ್ಯಾಗ[೨]

ಅವಳ ನಗೆ ಬದುಕಿನ ಬಲೆಯಲ್ಲಿ ಕರುಳಿನ ಕಾವ್ಯದಲ್ಲಿ ಕಾಣಬಹುದು. ಕಂದಮ್ಮಗಳ ಸಾಲಿನಲ್ಲಿ ಸುಟ್ಟುಹೋಯಿತು ಎಂಬ ಉಪಮೆ ಹಳ್ಳಿಯ ಯುವಕನ ಮಾತಿನಲ್ಲಿ ಬಂದಿರುವುದರಿಂದ ಅದರ ಸ್ವಾರಸ್ಯ ಹೆಚ್ಚಾಗಿದೆ. ಇದು ಕಳೆದು ಹೋದುದನ್ನು ಹಂಬಲಿಸುವ ಕವನ. ಆಡು ನುಡಿಯ ಬಳಕೆ ನಿತ್ಯ ಜೀವನದ ಉಪಮೆ. ಭಾವದ ತೀವ್ರತೆಗೆ ತಕ್ಕ ಅಭಿವ್ಯಕ್ತಿ. ಕಳೆದು ಹೋದ ಸುಖದ ದಿನಗಳನ್ನು ಮತ್ತೆ ಪಡೆಯಬೇಕೆಂಬ ಹಂಬಲ ವಾಸ್ತವ ಪ್ರಜ್ಞೆ. ಇವುಗಳಿಂದ ಬಿಸಿಲುಗುದುರೆ ಯಶಸ್ವಿಯಾಗಿದೆ. ಬಿಸಿಲುಗುದುರೆ ಎಂಬ ಹೆಸರು ಅರ್ಥಪೂರ್ಣವಾಗಿದೆ.

ಕನ್ನಡದ ಜಾನಪದ ಕಾವ್ಯದ ಸತ್ವವನ್ನು ಅರಗಿಸಿಕೊಂಡ ಕವಿ ಎಂದೇ ಬೇಂದ್ರೆಯವರು ಖ್ಯಾತರಾಗಿದ್ದಾರೆ. ಈ ಮಾತಿನಲ್ಲಿ ಸತ್ಯವಿಲ್ಲದೆ ಇಲ್ಲ. ಆದರೆ ಅದೊಂದೆ ಕಾರಣಕ್ಕಾಗಿಯೇ ಬೇಂದ್ರೆಯವರನ್ನು ಮಹತ್ವದ ಕವಿ ಎಂದು ತಿಳಿಯುವುದು ತಪ್ಪಾಗುತ್ತದೆ. ಆದರೆ ಬೇಂದ್ರೆಯವರ ಭಾಷೆ ಸಂಪೂರ್ಣವಾಗಿ ಜನಪದ ಭಾಷೆ ಎಂದರೆ ತಪ್ಪಾಗುತ್ತದೆ. ಅವರ ಕಾವ್ಯದ ಭಾಷೆಯ ಶೈಲಿ, ವೈವಿಧ್ಯತೆಯಿಂದ ಬೆರಗುಗೊಳಿಸುವಂತಾಗಿದೆ. ಅಚ್ಚಗನ್ನಡ, ಬಳಕೆಗನ್ನಡ ಗ್ರಾಮೀಣ ಭಾಷೆ, ನಗರ ಭಾಷೆ, ಸಂಸ್ಕೃತ ಭೂಯಿಷ್ಟ ಭಾಷೆ ಇವೆಲ್ಲವನ್ನೂ ಬೇಂದ್ರೆಯವರ ಕಾವ್ಯದಲ್ಲಿ ಕಾಣಬಹುದು.

ಪ್ರೇಮ ಕೇಂದ್ರ ವಸ್ತುವಾಗುಳ್ಳ ಕೆ.ಎಸ್.ನರಸಿಂಹಸ್ವಾಮಿಯವರ ಕವನಗಳು ಜನಪದ ಪ್ರೇಮಗೀತೆಗಳಿಗಿಂತ ಭಿನ್ನವಾದುದು. ಇವರ ಪ್ರಜ್ಞೆ ಹೆಚ್ಚು ನಾಗರೀಕವಾಗಿದ್ದು, ಸನ್ನಿವೇಶಗಳನ್ನು ವೈಭವೀಕರಿಸುವಲ್ಲಿ ತೃಪ್ತಿ ಪಡೆಯುತ್ತದೆ. ಜನಪದ ಗೀತೆಗಳಲ್ಲಿ ವ್ಯಕ್ತವಾಗುವ ಸಂವೇದನೆಗಳಿಗೆ ಹೆಚ್ಚು



೧ ಹಾಡು ಪಾಡು ಬಿಸಿಲುಗುದುರೆ ಪುಟ ೯
೨ ಹಾಡು ಪಾಡು ಬಿಸಿಲುಗುದುರೆ ಪುಟ ೩

ಉತ್ಕಟತೆಯಿರುತ್ತದೆ. ಆದರೆ ಕೆ.ಎಸ್.ನ. ಅವರಲ್ಲಿ ಕಂಡು ಬರುವ ಸಂವೇದನೆ ಹೆಚ್ಚು ನಯವಾದದ್ದು, ನಾಗರೀಕವಾದದ್ದು. ಅವರ ಭಾಷೆ ಸೀಮಿತ ವಲಯದ್ದಾಗಿದ್ದು, ತೀರ ಸಹಜವೆನಿಸುವುದಿಲ್ಲ... ಈ ಲಾವಣ್ಯವು ಮಣ್ಣು ನೆಲದಿಂದ ಬಂದುದಲ್ಲ ಎನಿಸಿಬಿಟ್ಟಿದೆ ಎನ್ನುವ ದ.ರಾ. ಬೇಂದ್ರೆಯವರ ಮಾತುಗಳ ಇದೇ ಅರ್ಥವೂ ಆಗಿರಬೇಕು.

ಕೆ.ಎಸ್.ನ.ರವರ ಭಾಷೆಯ ಬಳಕೆಯ ಓಟ ಸರಳವಾದುದು. ಅವರ ವಾಕ್ಯಗಳ ಓಟದಲ್ಲಿ ಒಂದು ಬಗೆಯ ಲಾಲಿತ್ಯವನ್ನು ಮೂಡಿಸುತ್ತದೆ. ಕೆ.ಎಸ್.ನ.ರವರ 'ಗೃಹಲಕ್ಷ್ಮಿ' ಕವನ ನವದಂಪತಿಗಳ ಸುಂದರ ಜೀವನದ ಮಾದರಿಯಾಗಿ ಕಾಣಿಸಿಕೊಳ್ಳುತ್ತದೆ. ಕವಿಯ ಕನಸುಗಾರಿಕೆ, ಕಲ್ಪನಾರಮ್ಯತೆ, ಭಾವಕೋಮಲತೆ, ವರ್ಣನಾ ಕೌಶಲ, ಚಿತ್ರಕಶಕ್ತಿ.. ಇವೆಲ್ಲವನ್ನು ಅಭಿವ್ಯಕ್ತಿಗೆ ತರಲಾಗಿದೆ. ಸಂಸಾರದ ಸೊಗಸುಗಾರಿಕೆಯನ್ನು ಪ್ರತಿಬಿಂಬಿಸುತ್ತದೆ. ಜೀವನದ ಸಾಫಲ್ಯ ದಾಂಪತ್ಯದ ಸಾಫಲ್ಯದಲ್ಲಿಯೆ ಇದೆ ಎಂಬುದನ್ನು ಕವನ ಬೋಧಿಸುತ್ತದೆ.

ನನ್ನವಳು ನನ್ನೆದೆಯ ಹೊನ್ನಾಡನಾಳುವಳು
ಬೆಳಗುಗೆನ್ನೆಯ ಚೆನ್ನೆ ನನ್ನ ಮಡದಿ
ಹೊಳೆಯ ಸುಳಿಗಳಿಗಿಂತ ಆಳ ಕಣ್ಣಿನ ಚೆಲುವು
ಅವಳೊಮ್ಮೆ ಹೆರಳ ಕೆದರಿ
ಕಪ್ಪುಗುರುಳನ್ನು ಬೆನ್ನ ಮೇಲೆಲ್ಲ ಹರಡಿದರೆ
ದೂರದಲಿ ಗಿರಿಯ ಮೇಲೆ
ಇಳಿದಂತೆ ಇರುಳ ಮಾಲೆ ೧

ಭಾವಸೂಕ್ಷ್ಮವನ್ನು ಹೊಂದಿರುವ ಈ ಚಿತ್ರ ಸಹಜವಾಗಿಯೇ ಪರಿಶುದ್ಧ ಅಭಿರುಚಿಯನ್ನು ಮನಸ್ಸಿಗೆ ತರುತ್ತದೆ. ವಿವರಣೆ ಅಗತ್ಯವಿಲ್ಲದಷ್ಟು ಪದ್ಯದಲ್ಲಿದೆ. ಆದರೆ ತನ್ನ ರೂಪಕ ಶೈಲಿಯಿಂದ ರಂಜಿಸಿದೆ. ಹೆಂಡತಿಯ ಸ್ಥಾನದಲ್ಲಿರುವ ಹೆಣ್ಣಿನ ಚಿತ್ರವನ್ನು ಕೊಡುತ್ತಿರುವುದರಿಂದ ಗಾಂಭಿರ್ಯ ಭಾವನೆ ಅಭಿವ್ಯಕ್ತಿಯಲ್ಲಿ ಮೂಡಿ ಬಂದಿರುವುದನ್ನು ಕಾಣುತ್ತೇವೆ. ಬೆನ್ನ ಮೇಲೆ ಹರಡಿದ ಕಪ್ಪು ಕುರುಳಿನ ಚಿತ್ರ ದೂರದ ಗಿರಿಯ ಮೇಲೆ ಇಳಿದ ಇರುಳಿನಂತೆ ಕಂಡುದು ರಮ್ಯಾದ್ಭುತ ಕಲ್ಪನೆಯೇ ಆಗಿದೆ.

ದಾಂಪತ್ಯ ಜೀವನದ ಎಲ್ಲಾ ಆಕರ್ಷಕ ಮತ್ತು ಆತಂಕದ ಕ್ಷಣಗಳಿಗೆ ನವಿರಾದ ಅಭಿವ್ಯಕ್ತಿಯನ್ನು ಕೊಡಿಸಬಲ್ಲರು. ವಸ್ತು ಅಥವಾ ಒಡಲಿನಲ್ಲಿ ಸುಪ್ತವಾಗಿರುವ ಸೌಂದರ್ಯವನ್ನು ಹೇಗೆ ನಜೂಕಾಗಿ ಬಿಡಿಸಬಲ್ಲರು ಎಂಬುದಕ್ಕೆ 'ಒಬ್ಬಳೆ ಮಗಳು' ಕವನವೇ ಸಾಕ್ಷಿ. ತನ್ನ ಒಬ್ಬಳೇ ಮಗಳು ಗಂಡನ ಮನೆಯಿಂದ ಕರೆದುಕೊಂಡು ಹೋಗಲು ಬಂದು ಕಣ್ಣೀರ ಮಿಡಿದ ತಂದೆಯನ್ನು ಕುರಿತು ಕವಿಯ ಮಾತು ಹೀಗಿವೆ...



೧ ಮೈಸೂರು ಮಲ್ಲಿಗೆ:ಗೃಹಲಕ್ಷ್ಮಿ ಮಲ್ಲಿಗೆ ಮಾಲೆ ಪುಟ ೪

ಒಬ್ಬಳೇ ಮಗಳೆಂದು ನೀವೇಕೆ ಕೊರಗುವಿರಿ
ಒಬ್ಬಳೇ ಮಡದಿಯೆನಗೆ
ಹಬ್ಬದೂಟದ ನಡುವೆ ಕಣ್ಣೀರ ಸುರಿಸದಿರಿ
ಸುಮ್ಮನಿರಿ ಮಾವನವರೇ [೧]

ಇಲ್ಲಿ ಸಂಭಾಷಣೆಯ ಶೈಲಿ ಮತ್ತು ಆಡುಮಾತಿನ ಧಾಟಿ ಕಾಣಿಸಿಕೊಳ್ಳುತ್ತದೆ. ಇದು ಕೆ.ಎಸ್.ನ.ರವರ ಭಾಷಾ ವೈವಿಧ್ಯತೆಯನ್ನು ತೋರಿಸುತ್ತದೆ. ಮಗಳನ್ನು ಕರೆಯಲು ಬಂದು ದುಃಖಿಸುತ್ತಿರುವ ತಂದೆಯನ್ನು ಅಳಿಯ ಸಮಾಧಾನ ಪಡಿಸುವುದು ಇಲ್ಲಿ ವಸ್ತು. ಆದರೆ ಧ್ವನಿ ಇರುವುದು 'ಒಬ್ಬಳೇ ಮಡದಿಯೆನಗೆ' ಎಂಬ ಮಾತಿನಲ್ಲಿ ಇದು ಸಮಾಧಾನಕ್ಕಾಗಿ ಬಂದ ಚಮತ್ಕಾರದ ನುಡಿಯಲ್ಲ. ಮೈಸೂರು ಮಲ್ಲಿಗೆಯ ಹರವುವಿನಲ್ಲಿ ಕಾಣಿಸಿಕೊಳ್ಳುವ ಗಂಡನ ಪಾತ್ರದ ಮೂಲಕ ಪರಿಶೀಲಿಸಿದರೆ ಸ್ಪಷ್ಟವಾಗುತ್ತದೆ. ಪದ್ಯದ ಒಬ್ಬಳೇ ಮಗಳು ಸಹಜೋಕ್ತಿಯಾಗಿದೆ. ಒಬ್ಬಳೇಮಡದಿ ವಿಶೇಷೋಕ್ತಿ. ಹೀಗಾಗಿ ಇದು ಕೆ.ಎಸ್.ನ.ರವರ ಭಾಷಾ ವೈವಿಧ್ಯತೆಯನ್ನು ಹೊಂದಿರುವ ಪದ್ಯ ಇಲ್ಲಿ ಭಾವ ಮುಖ್ಯವಾಗುತ್ತದೆ.

ಹೆಣ್ಣು ಮಕ್ಕಳಿಗೆಲ್ಲ ತೌರೂರು ಬಲುದೂರ
ತೌರೆನಗೆ ನನ್ನ ಗೌರಿ
ತನ್ನ ಪ್ರೇಮದ ನಡುವೆ ನನ್ನ ದೇವರ ತರುವ
ತೇರವಳು ನನ್ನ ಗೌರಿ [೨]

ಒಂದು ಭಾವಾನುಭವದ ಅರ್ಥವಿಶದತೆ ಹಾಗೂ ಸೋಜಿಗತೆಯಿಂದ ಅಭಿವ್ಯಕ್ತಿಯನ್ನು ತರಬಲ್ಲುದು ಎಂಬುದಕ್ಕೆ ಈ ಸಾಲುಗಳು ಗಮನಾರ್ಹವಾಗಿದೆ.

ಕೆ.ಎಸ್.ನ.ರವರ ಮತ್ತೊಂದು ಕವನ 'ಬಳೆಗಾರನ ಹಾಡು'. ಒಂದು ಭಿನ್ನ ಸಂಸ್ಕೃತಿಯ ದಾಖಲಿಸುವುದರ ಜೊತೆಗೆ ಕಲಾತ್ಮಕತೆಯನ್ನು ಸಾಧಿಸುತ್ತದೆ. ಈ ಕವನ ಮಾವನ ಮೇಲಿನ ಮುನಿಸಿನಿಂದ ಗಂಡ ತನ್ನ ಹೆಂಡತಿಯನ್ನು ನೋಡಲು ಹೋಗಿರುವುದಿಲ್ಲ. ಈ ಹಿನ್ನಲೆಯಲ್ಲಿ ಆಕೆಯ ವೇದನೆಯನ್ನು ಬಳೆಗಾರ, ಗಂಡನಿಗೆ ತಿಳಿಸುವ ರೀತಿಯಲ್ಲಿ ಅಭಿವ್ಯಕ್ತಿಯಿದೆ. ಅತೃಪ್ತ ಆದರೂ ಆಪ್ತ ವಾತಾವರಣದ ಚಿತ್ರಣವೇ ಈ ಕವನದ ಉದ್ದೇಶಿತ ವಸ್ತು.

ಸಿರಿಗೌರಿಯಂತೆ ಬಂದರೂ ತಾಯಿ ಹಸೆಮಣೆಗೆ
ಸೆರಗಿನಲ್ಲಿ ಕಣ್ಣೀರನೊರಸಿ
ಸುಖದೊಳಗೆ ನಿಮ್ಮ ನೆನೆದರು ತಾಯಿ ಗುಣವಂತೆ
ದೀಪದಲ್ಲಿ ಬಿಡುಗಣ್ಣ ನಿಲಿಸಿ [೩]

ಇಲ್ಲಿ ಚಿತ್ರಕಶಕ್ತಿ ಗಮನಿಸಬೇಕಾಗಿರುವಂಥದ್ದು. ಸುಖದಯಾತನೆಯನ್ನು ಅನುಭವಿಸಬೇಕಾಗಿ ಬಂದ ಆಕೆಯ ಸ್ಥಿತಿಯನ್ನು ಇದಕ್ಕಿಂತಲೂ ಉತ್ತಮವಾಗಿ ಕಟ್ಟಿಕೊಂಡಲು ಸಾಧ್ಯವಿಲ್ಲ. 'ದೀಪದಲ್ಲಿ ಬಿಡುಗಣ್ಣ



೧ ಒಬ್ಬಳೇ ಮಗಳು ಮಲ್ಲಿಗೆ ಮಾಲೆ ಪುಟ ೧೬
೨ ಒಬ್ಬಳೇ ಮಗಳು ಮಲ್ಲಿಗೆ ಮಾಲೆ ಪುಟ ೧೬
೩ ಬಳೆಗಾರನ ಹಾಡು ಮಲ್ಲಿಗೆ ಮಾಲೆ ಪುಟ ೧೭

ನಿಲಿಸಿ' ಎಂಬ ಮಾತಿನಲ್ಲಿನ ದೀಪದ ಪ್ರತಿಮೆ ಅವಳ ಪರಿಶುದ್ಧ ವ್ಯಕ್ತಿತ್ವ ಮತ್ತು ಮುಗ್ಧ ಆಕಾಂಕ್ಷೆಯ ಪ್ರತೀಕವಾಗಿದೆ. ಇದನ್ನು ಸಮರ್ಥಿಸಲೆಂಬಂತೆ ಹಿಂದಿನ ಸಾಲಿನಲ್ಲಿ 'ಗುಣವಂತೆ' ಎಂಬ ಪದವಿದೆ. ಹೀಗೆ ಇಡೀ ಪದ್ಯ ಸಂದರ್ಭವನ್ನು ಅಭಿನಯಿಸಿ ತೋರುತ್ತದೆ.

ಸಾಮಾನ್ಯ ವಿಷಯಗಳನ್ನು ಹೇಗೆ ಕಾವ್ಯ ಮಾಡಬಹುದೆಂಬುದಕ್ಕೆ 'ರಾಯರು ಬಂದರು ಮಾವನ' ಮನೆಯ ಎಂಬ ಮಾತಿನಿಂದ ಆರಂಭವಾಗುವ ಕವನವೇ ನಿದರ್ಶನ. ಈ ಕವನದಲ್ಲಿ ತೌರಿಗೆ ಬಂದ ಗಂಡನಿಗೆ ಹೆಂಡತಿ ಕಾಣುವುದಿಲ್ಲ. ಮಾವ ಮತ್ತು ನಾದಿನಿಯ ಸ್ವಾಗತ ಮತ್ತು ಅವರ ಆತಿಥ್ಯ ದೊರೆಯುತ್ತದೆ. ಮತ್ತೆ ಹೊರಡಲನುವಾದಾಗ ಹೆಂಡತಿಯ ಪ್ರವೇಶವಾಗುತ್ತದೆ. ಕವಿ ಮೊದಲಿನಿಂದಲೂ ಕಾಪಾಡಿಕೊಂಡು ಬಂದಿದ್ದ ಕುತೂಹಲವನ್ನು, ಒಗಟನ್ನು ಬಿಡಿಸಿಬಿಡುತ್ತಾರೆ. ಇದು ಕವಿಯ ಕಲಾವಂತಿಕೆಯ ಕುರುಹು.

ದಾಂಪತ್ಯದ ಆರಂಭದ ಪರಿಸರವನ್ನು ಬಿಂಬಿಸುವ 'ಬಾರೆ ನನ್ನ ಶಾರದೆ' ಸ್ವಭಾವೋಕ್ತಿ ಕಾವ್ಯವೂ ಒಂದು ಕಾವ್ಯವಾಗಬಲ್ಲುದು ಎಂಬ ಹಂತಕ್ಕೆ ಬಂದಾಗ ಈ ಕವನ ಇಂತಹ ಕಾವ್ಯ ಪ್ರಕಾರಕ್ಕೆ ನಿಸ್ಸಂದೇಹವಾಗಿ ಸೇರುತ್ತದೆ. ಈ ಕವಿತೆ ಕೇವಲ ಸರಳವಲ್ಲ ಎಂಬುದನ್ನು ಅದರ ಸಂದರ್ಭದಲ್ಲಿಯೇ ನೋಡಬಹುದು. ವಸ್ತು ಸ್ಥಿತಿಯನ್ನು ಹೇಳುತ್ತಲೇ ಕವಿತೆ ತಾತ್ತ್ವಿಕವಾಗುತ್ತದೆ.

ಬದುಕು ನೆಳಲ ಬಿಸಿಲದಾರಿ
ಮಿತ್ತು ಕಳ್ಳ ಬೆಕ್ಕಿನಂತೆ
ಹೊಂಚುತಿಹುದು ಯಾರ ದಾರಿ
ಗೆಲ್ಲಿ ಕೊನೆಯೊ ಇಂದಿನಂತೆ
ನಾಳೆ ಎನ್ನವಾಗದು
ಇತ್ತ ಸಿರಿಯು ನಿಲ್ಲದು
ಮತ್ತೆ ಎಲ್ಲ ದೊರಕದು ೧

ಈ ಮಾತುಗಳು ಬದುಕಿನ ಸತ್ಯವನ್ನು ನಿರಾಭರಣವಾಗಿಯೇ ಪ್ರಸ್ತಾಪಿಸುತ್ತವೆ. ಸಾವಿನನೆರಳು ಸದಾಬದುಕನ್ನು ಹಿಂಬಾಲಿಸುವುದರಿಂದ ಶಾಶ್ವತವಲ್ಲವಾದರೂ ಬದುಕನ್ನು ಸವಿಯುವುದಕ್ಕೆ ಕವಿತೆ ಕರೆಕೊಡುತ್ತದೆ. ಸಂಸಾರದಲ್ಲಿ ಸವಿ ಹೊಂದಾಣಿಕೆ ಸಾಮರಸ್ಯ ಇರಲಿ ಎನ್ನುವುದು ಕವನದ ಸಂದೇಶ. ಅದನ್ನು ಕವನ ತನ್ನ ಸರಳ ಮೋಹಕ ವಿಧಾನದಿಂದ ಸಹೃದಯನಿಗೆ ತಲುಪಿಸುವುದರಲ್ಲಿ ಯಶಸ್ವಿಯಾಗಿದೆ.

'ದೀಪದ ಮಲ್ಲಿ' ಕವನ ಸಂಕಲನದ 'ಹೀಗಾಯಿತು' ಕವನ ಸಾಮಾನ್ಯ ನೆಲೆಯಲ್ಲಿ ವಿಶೇಷ ಅನುಭವನ್ನು ಉಂಟುಮಾಡುವಂಥದ್ದು ಇದನ್ನು ಕೌಟುಂಬಿಕ ಚೌಕಟ್ಟಿನಲ್ಲಿ ಇಡಲು ಪ್ರಯತ್ನಿಸಿರುವುದು ಕವಿಯ ಕಲಾವಂತಿಕೆಗೆ ಸಾಕ್ಷಿಯಾಗಿದೆ.



೧ ಬಾರೆ ನನ್ನ ಶಾರದೆ ಮಲ್ಲಿಗೆ ಮಾಲೆ ಪುಟ ೭

ಯಾರೋ ನನ್ನವರಂತೆ ನನ್ನ ಸ್ನೇಹಿತರಂತೆ
ಬಂದಿದ್ದರಂತೆ ಸಂಜೆಯಲಿ
ನನ್ನ ಬಲ್ಲವರಂತೆ ನನ್ನ ಕೇಳಿದರಂತೆ
ಇಲ್ಲ ಎಂದಟ್ಟಿದಳು ಗೌರಿ[೧]

ಇದೇ ನಮ್ಮ ಬಾಡಿಗೆಯ ಬೀಡು ಬಾಗಿಲ ಮೇಲೆ
ಒಳಗಿಹರು ಇಲ್ಲೆನುವ ಹಲಗೆಯಿಲ್ಲ
ಇಹರೊ ಇಲ್ಲವೊ ಎಂದು ಅವರಿವರು ಕೇಳಿದರೆ
ಇಲ್ಲ ಎಂದೋಡಿಸುವುದುಚಿತಲ್ಲ[೨]

ಈ ವಸ್ತು ದೈನಂದಿನ ಜೀವನದಲ್ಲಿ ನಮಗೆ ಪರಿಚತವೇ ಬಂದವರು ಯಾರು ಎಂಬುದರ ಪ್ರಶ್ನೆ ಕವನದ ಬಹುಭಾಗವನ್ನು ಆಕ್ರಮಿಸುವುದು ಸಹಜ. ಇವರು ನನ್ನವರು, 'ಸ್ನೇಹಿತರು, ಬಲ್ಲವರು' ಎಂದು ಗುರುತಿಸಲು ಹೋಗಿ ಆತ್ಮೀಯತೆಯ ಸ್ವರೂಪದಲ್ಲಿಯೇ ಆತಂಕದ ಎಳೆಗಳನ್ನು ಬಿಚ್ಚಲು ಕವನ ಹೊರಡುವುದನ್ನು ಕಾಣುತ್ತೇವೆ.

ಹೀಗೆ ಪ್ರಶ್ನೆ ಮತ್ತು ಆಶ್ಚರ್ಯದ ಮೂಲಕ ಕವಿತೆ ಮುಂದುವರಿಯುತ್ತದೆ. ಬಂದಿದ್ದವರು ಯಾರು ಎಂದು ಪದೇ ಪದೇ ಹೆಂಡತಿಯನ್ನು ಪ್ರಶ್ನಿಸುವ ಗಂಡನಿಗೆ ಉತ್ತರಿಸಿ ಸಾಕಾದ ಹೆಂಡತಿಯು ಹೀಗೆ ಹೇಳುತ್ತಾಳೆ...

ಇನ್ನು ನನ್ನನ್ನು ಕೇಳಿ ಕೊಲ್ಲದಿರಿ ನಾನರಿಯೆ
ಅವರಿಂದ ನಿಮಗೇನು ಮತ್ತೆ ಬಹರು
ಮತ್ತೆ ಬರುವರು ನಾಳೆ, ಇದ್ದುಕೇಳಿರಿ ನೀವೆ
ಬಂದೆ ಬರುವುರು ಎಂದು ನಕ್ಕು ನುಡಿದು[೩]

ಕವನ ಸಾಗಿದಂತೆ ಒಳಗೆಯೇ ಬಂದು ಪತ್ತೆದಾರಿ ಪ್ರವೃತ್ತಿ ಬೆಳೆಯುವುದನ್ನು ಲಕ್ಷಿಸಬಹುದು. ತನ್ನನ್ನು ಹಿಂಸಿಸದಿರಿ ಎಂದು ಹೇಳಿದ ಹೆಂಡತಿಯೇ ನಕ್ಕು ನುಡಿದದ್ದು ಭರವಸೆಯ ಬೆಳಕೊಂದನ್ನು ತರುವಂತೆ ತೋರುತ್ತದೆ. ಶಾಂತ ಚಿತ್ತದಿಂದ ಪರಿಶೀಲಿಸಿದೆ. ಬಿಳಿಯ ಹೂಗಳ ಮೇಲೆ ಬಿಳಿ ಹಾಲನೆರೆದಂತೆ ಬೆಳ್ಮುಗಿಲ ಮೇಲೆ ಬೆಳ್ದಿಂಗಳಿದಂತೆ ಎಂಬ ಮಾತುಗಳು ತಂಪಾಗಿ ಮಲಗಿರುವ ಪುಣ್ಯವಂತೆಯನ್ನುಚಿತ್ರಿಸಲು ಹೊರಡುವುದು ಗಮನಾರ್ಹ. ಇದು ಒಂದು ಚಿತ್ರದೃಶ್ಯವನ್ನು ನಮ್ಮ ಕಣ್ಮುಂದೆ ತರುತ್ತದೆ.

ಕವನದ ಮುಕ್ತಾಯ ಮೊದಲಿನಿಂದ ಬಂದ ಗಂಡ ಹೆಂಡತಿಯ ದ್ವಂದ್ವ ಸಂವಾದ ಇದರ ಪ್ರಕಟಣೆಯ ದ್ವಂದ್ವಾತೀತವಾಗಿ ಪರಿಹಾರಗೊಳ್ಳುವುದು. ಕವನದ ಕ್ರಿಯೆ ಸಾಮಾನ್ಯ ನೆಲೆಯಿಂದ ಅಸಾಮಾನ್ಯ ನೆಲೆಗೆ ಪ್ರವೇಸಿಸುವುದನ್ನು ಕಾಣುತ್ತೇವೆ.



೧ ದೀಪದ ಮಲ್ಲಿ ಮಲ್ಲಿಗೆ ಮಾಲೆ ಪುಟ ೧೧೫
೨ ದೀಪದ ಮಲ್ಲಿ ಹೀಗಾಯಿತು ಮಲ್ಲಿಗೆ ಮಾಲೆ ಪುಟ ೧೧೫
೩.ದೀಪದಮಲ್ಲಿ ಹೀಗಾಯಿತು ಮಲ್ಲಿಗೆ ಮಾಲೆ ಮಲ್ಲಿಗೆ ಮೈ.ಮ. ಪುಟ ೧೧೬

ಸಂಜೆಯಲಿ ಬಂದವರು ನನ್ನ ಬಲ್ಲವರಂತೆ
ದೇವದೂತರು ಎಂದು ನಂಬಬಹುದೇ
ಮನವೊಲಿದು ಬಂದವರು ನನ್ನಸ್ನೇಹಿತರಂತೆ
ಎಲ್ಲ ಬದುಕಿನ ಮಿತ್ರರವರೆನ್ನಬಹುದೇ[೧] ?

ಇಂಥವರು ಒಂದೆ ಸಲ ಬಂದು ತೆರಳುವುದಿಲ್ಲ
ಒಂದು ಘಳಿಗೆ ಭೂಮಿ ಸ್ವರ್ಗವಹುದೆ?
ಮತ್ತೆ ಬಹರೆಂದಿವಳು ಆಡಿದುದು ಸಟೆಯಲ್ಲ
ಮಳೆ ಬೆಳಸು ಬದುಕೆಲ್ಲ ಇವರಿಂದಲೆ[೨]?

ಕವನದ ದೇವದೂತರು ಕಲ್ಪನೆ ವಸ್ತುವನ್ನು ಆಧ್ಯಾತ್ಮಿಕತೆಗೆ ತೆಗೆದುಕೊಂಡು ಹೋಗುವುದನ್ನು ಕಾಣುತ್ತೇವೆ. 'ದೇವದೂತರನ್ನು' ಎಲ್ಲ ಬದುಕಿನ ಮಿತ್ರರೆಂದು ಕರೆಯುವುದರಿಂದ ವಾಸ್ತವಿಕಾರ್ಥದೊಡನೆ ಆಧ್ಯಾತ್ಮಿಕಾರ್ಥ ತಳುಕು ಹಾಕಿಕೊಂಡಿರುವುದು ಸ್ಪಷ್ಟವಾಗುತ್ತದೆ. ಈ ಭೂಮಿ ಸ್ವರ್ಗವಾಗಬೇಕಾದರೆ ದೇವದೂತರು ಮತ್ತೆ ಬರಬೇಕೆಂಬ ಅರ್ಥವನ್ನು ಕವನ ಕಡೆಗೆ ಪ್ರತಿಪಾದಿಸುತ್ತದೆ. ಹೀಗೆ ಇಂತಹ ಒಂದು ವಾಸ್ತವಾಂಶವನ್ನು ತೆಗೆದುಕೊಂಡು ಆಧ್ಯಾತ್ಮಿಕತೆಯ ಹಿನ್ನಲೆಯಲ್ಲಿ ರಚಿಸಿರುವ ಕವಿಯು ಇಲ್ಲಿ ಬಳಕೆ ಮಾಡಿಕೊಂಡಿರುವ ಪದಗಳು, ಸಂವಾದ, ಚಾತುರ್ಯ, ಅವರ ಸಶಕ್ತವಾದ ಅಭಿವ್ಯಕ್ತಿ ಸಾಮರ್ಥ್ಯಕ್ಕೆ ಸಾಕ್ಷಿಯಾಗಿದೆ.

ಚಿತ್ರ, ರೂಪಕ, ಪ್ರತಿಮೆ ಹಾಗೂ ಶಿಲ್ಪಗಳು ಇವರ ಕಾವ್ಯದಲ್ಲಿ ವೈವಿಧ್ಯತೆಯಿಂದ ಕೂಡಿವೆ. ಇವುಗಳ ಭಾಷಾ ವೈವಿಧ್ಯದಿಂದ ಗಮಿಸಬಹುದು. ಇವರ ಭಾಷೆ ಮೈಸೂರು ಮಲ್ಲಿಗೆ ಕಾಲದಿಂದಲೂ ರೂಪಕ ಪ್ರತಿಮೆಯಿಂದ ಕೂಡಿದೆ.

೧. ತೆಂಗು ಗರಿಗಳ ಮೇಲೆ ತುಂಬ ಚಂದಿರ ಬಂದು
ಬೆಳ್ಳಿ ಹಸುಗಳು ಹಾಲು ಕರೆಯುತಿರಲು
೨. ಗಾಳಿ ಆಡಿದರೆ ಬನವೂ ಆಡಿ ಹೂವಿನುಂಗುರ
೩. ನೀರೊಳಗೆ ವೀಣೆಮಿಡಿದಂತೆ ಆಡಿದ ಮಾತ
ಬೇಲಿಯಲ್ಲಿ ಹಾವು ಹರಿದಂತೆ
೪. ಕೈ ಹಿಡಿದ ಮಡದಿಯೇ ಸಂಕ್ಷಿಪ್ತಗಾಂಧಾರಿ
೫. ತಳ್ಳುಗಾಡಿಯ ತುಂಬ ಚಂದ್ರಹಾಸ

ಹೀಗೆ ಬೆಳೆಯುತ್ತಾ ಹೋಗುವಷ್ಟು ಸಮೃದ್ಧಿ ಇವರ ಕಾವ್ಯದ್ದು. ಯಾವ ಕವಿತೆಯನ್ನೇ ನೋಡಲಿ ಇಂತಹ ಸವಿನುಡಿ ಚಿತ್ತಾರಗಳೇ ತುಂಬಿಕೊಂಡಿವೆ. ಇವರ ಕವಿತೆಗಳು ಚಿತ್ರಮಯವಾಗಿ ಕಣ್ಣಿಗೆ ಕಟ್ಟುವಂತೆ



೧ ದೀಪದಮಲ್ಲಿ ಹೀಗಾಯಿತು ಮಲ್ಲಿಗೆ ಮಾಲೆ ಪುಟ ೧೧೭
೨ ದೀಪದಮಲ್ಲಿ ಹೀಗಾಯಿತು ಮಲ್ಲಿಗೆ ಮಾಲೆ ಪುಟ ೧೧೭

ಮಾಡಬಲ್ಲವು. ಈ ಚಿತ್ರಗಳು ಅರ್ಥಕ್ಕಾಗಿ ದುಡಿಯುವುವು. ಇವರ ಕಾವ್ಯಗಳಲ್ಲಿ ಬರುವ ಚಿತ್ರ, ಉಪಮೆ. ರೂಪಕ, ಪ್ರತಿಮೆಗಳು ಹೆಚ್ಚು ಅಲಂಕಾರಿಕವಾಗಿವೆ. ಇವರ ಶೀಲಾಲತೆಯಿಂದೀಚೆಗೆ ಇವರ ಪ್ರತಿಮೆ ರೂಪಕಗಳು ಹಾಗೂ ಚಿತ್ರಗಳು ಮೊದಲಿಗಿಂತ ಹೆಚ್ಚು ಅರ್ಥವಂತಿಕೆಯಿಂದ ಕೂಡಿದೆ. ಇವರ 'ಗಡಿಯಾರದಂಗಡಿಯ ಮುಂದೆ', 'ಕೇಳುವವರಿಲ್ಲದ ಮಗು', 'ಮನೆಯಿಂದ ಮನಗೆ', 'ನಲವತ್ತರ ಚೆಲುವೆ', 'ಮುಚ್ಚಿದ ಕಿಟಕಿ', 'ತೆರೆದ ಬಾಗಿಲು', 'ಓಲಗ', ಇಂಥ ಕವಿತೆಗಳು ಅರ್ಥಕ್ಕಾಗಿ ದುಡಿಯುವ ಚಿತ್ರಗಳಿದ ಕೂಡಿ ಸಂಜೀವಗೊಂಡಿದೆ. ಇವರ ಕಾವ್ಯ ಚಿತ್ರ ಪ್ರತಿಮೆಗಳು ಮೂಡಿ ಅರ್ಥಪೂರ್ಣವೂ ಧ್ವನಿರಮ್ಯವೂ ಆಗಿವೆ.

# ಉಪ ಸಂಹಾರ

ಆಧುನಿಕ ಕನ್ನಡ ಕಾವ್ಯದ ಪ್ರಮುಖ ಲೇಖಕರಾದ ದ.ರಾ.ಬೇಂದ್ರೆ ಮತ್ತು ಕೆ.ಎಸ್.ನರಸಿಂಹಸ್ವಾಮಿ ರವರು ಕಾವ್ಯಕ್ಷೇತ್ರದಲ್ಲಿ ಮಾಡಿರುವ ಸಾಧನೆ ಅಮೋಘವಾದುದು. ಈ ಕವಿಗಳ ದಾಂಪತ್ಯಗೀತೆಗಳು ಕನ್ನಡಕಾವ್ಯ ಪರಂಪರೆಯಲ್ಲಿ ವಿಶಿಷ್ಟವಾದ ಸ್ಥಾನವನ್ನು ಪಡೆದುಕೊಂಡಿದೆ. ದ.ರಾ.ಬೇಂದ್ರೆಯವರು ದಾಂಪತ್ಯಗೀತೆಗಳಷ್ಟೆ ಅಲ್ಲದೆ ವಿವಾಹ ಪೂರ್ವದ ಪ್ರಣಯದ ಚಿತ್ರಣವುಳ್ಳ ಕವಿತೆಗಳನ್ನು ಸಹಜವಾಗಿ ಅಭಿವ್ಯಕ್ತಿಸಿದ್ದಾರೆ ಇವರ ಕಾವ್ಯದಲ್ಲಿ ಗಂಡು ಹೆಣ್ಣಿನ ಸಂತೋಷ ಸಂಭ್ರಮದ ವಾತಾವರಣವನ್ನು ಬಿಂಬಿಸುವ ಕವಿತೆಗಳಲ್ಲದೆ ದುಃಖ, ನೋವಿನ ತೀವ್ರತೆಯಿಂದ ಕೂಡಿದ ವಿರಸ ದಾಂಪತ್ಯದ ಚಿತ್ರಣಗಳು ಸಹಜವಾಗಿಯೇ ಮೂಡಿಬಂದಿವೆ.

ಕೆ.ಎಸ್.ನರಸಿಂಹಸ್ವಾಮಿ ಅವರ ಕವಿತೆಗಳಲ್ಲಿ ಸುಖದಾಂಪತ್ಯವೇ ಮೊದಲ ಸ್ಥಾನವನ್ನು ಪಡೆದಿದ್ದರೂ, ವಿರಸದಾಂಪತ್ಯ ಚಿತ್ರಣಗಳು ಕೂಡ ಕಂಡು ಬರುತ್ತವೆ. ಆದರೆ ಬೇಂದ್ರಯವರಲ್ಲಿ ವಿರಸದ ಮತ್ತು ನೋವಿನ ತೀವ್ರತೆ ಇವರ ಕವಿತೆಗಳಲ್ಲಿ ಕಂಡುಬರುವುದಿಲ್ಲ. ಕೆ.ಎಸ್.ನರಸಿಂಹಸ್ವಾಮಿ ಅವರ ಕಾವ್ಯ ಕುಟುಂಬಕೇಂದ್ರಿತವಾದುದು ವಿವಾಹ ಪೂರ್ವ ಚಿತ್ರಣ ಬಂದರೂ ಅದು ದಾಂಪತ್ಯ ಚೌಕಟ್ಟಿನಲ್ಲಿಯೇ ರಚಿತವಾಗಿರುತ್ತದೆ. ಕೆ.ಎಸ್.ನರಸಿಂಹಸ್ವಾಮಿ ಅವರ ಕಾವ್ಯ ಸಾಂಪ್ರಾದಾಯಿಕವಾದುದಲ್ಲ, ಆದರೆ ಅಭಿರುಚಿಯನ್ನು ಬದಲಾಯಿಸುವ ಸಾಮರ್ಥ್ಯವುಳ್ಳದ್ದು. ಪ್ರೀತಿಯ ಮಹತ್ವ, ಅನ್ಯೋನ್ಯ ಮಧುರ ದಾಂಪತ್ಯದ ವಾಸ್ತವಾಧಾರಿತ, ಕನಸುಗಾರಿಕೆಯನ್ನು ಇವರ ದಾಂಪತ್ಯಗೀತೆಗಳಲ್ಲಿ ಕಾಣಬಹುದು. ಪ್ರಾರಂಭದಲ್ಲಿ ಪ್ರಣಯ ವಸ್ತುವನ್ನಾಗಿ ಮಾಡಿಕೊಂಡ ಕೆ.ಎಸ್.ನರಸಿಂಹಸ್ವಾಮಿಯವರು ಅನಂತರ ಇತರ ಮುಖಗಳ ಕಡೆಗೆ ತಿರುಗಿದರು. ನಂತರ ಇವರ ರಚನೆ ತಾತ್ವಿಕತೆಯಲ್ಲಿ ಕಾಣಿಸಿಕೊಂಡದ್ದು ಉಂಟು. ಸಣ್ಣಸಣ್ಣ ಸಂಗತಿಯನ್ನು ಕಾವ್ಯ ಮಾಡುವ ಕಲೆ ಕೆ.ಎಸ್.ನರಸಿಂಹಸ್ವಾಮಿ ಅವರಿಗೆ ಕರಗತವಾಗಿತ್ತು ಇದಕ್ಕೆ ಉತ್ತಮ ನಿದರ್ಶನ 'ಸಣ್ಣಸಂಗತಿ' ಕವನ.

ದ.ರಾ.ಬೇಂದ್ರೆಯವರ ಕೌಟುಂಬಿಕ ಗೀತೆಗಳು ಗ್ರಾಮೀಣ ಪರಿಸರದ ಹಿನ್ನಲೆಯಲ್ಲಿಯೇ ಮೂಡಿ ಬಂದಿದ್ದು ಸಾಮಾನ್ಯ ಜನಜೀವನ ಅವರ ನೋವು-ನಲಿವುಗಳನ್ನು ಪ್ರತಿಬಿಂಬಿಸುತ್ತವೆ. ಗಂಡು ಹೆಣ್ಣಿನ ಅಥವಾ ಗಂಡಹೆಂಡತಿಯ ಸಾಮರಸ್ಯ ಜೀವನದ ಕಲ್ಪನೆ ಕವಿಯದು. ಇವರ ಜೀವನಾದರ್ಶ 'ಒಲವೇ ನಮ್ಮ ಬದುಕು' ಎಂಬುದಾಗಿದೆ ಒಲವಿನ, ಚೆಲುವಿನ, ಬದುಕಿನಲ್ಲಿಯೇ ಸಿರಿತನವನ್ನು ಕಂಡ ಕವಿ ದ.ರಾ.ಬೇಂದ್ರೆಯವರಾಗಿದ್ದಾರೆ. ಕೆ.ಎಸ್.ನರಸಿಂಹಸ್ವಾಮಿಯವರ ಪ್ರಾರಂಭದ ರಚನೆಯ ಕವಿತೆಗಳು ಗ್ರಾಮೀಣ ಪರಿಸರದ್ದೆ ಎಂಬ ಭಾವನೆಯನ್ನು ಉಂಟು ಮಾಡುತ್ತವೆ ಆದರೆ ಆ ಕವಿತೆಗಳಲ್ಲಿನ ಗಂಡು ಅಥವಾ ಗಂಡ ಗ್ರಾಮೀಣ ಪರಿಸರದವನಂತೆ ಕಂಡುಬರುವುದಿಲ್ಲ ಅವನು ನಗರ ಸಂಸ್ಕೃತಿಯಿಂದ ಬಂದ ವಿದ್ಯಾವಂತನಂತೆ ಕಾಣುತ್ತಾನೆ. ಆದರೆ ಇಲ್ಲಿನ ಹೆಂಡತಿ ಅಥವಾ ಹೆಣ್ಣು ಬಹುತೇಕ ಗ್ರಾಮಾಂತರ ಪ್ರದೇಶದವಳೆಂಬುದು ಸ್ಪಷ್ಟವಾಗುತ್ತದೆ. ಸಾಮಾನ್ಯವಾಗಿ ಇವರ ಕವಿತೆಗಳಲ್ಲಿ ಮಧ್ಯಮವರ್ಗದ ಜೀವನವನ್ನು ಕಾಣಬಹುದು ಈ ಮಧ್ಯಮ ವರ್ಗದ ಕಲ್ಪನೆ ಬಂದುದೆ ನಗರದಿಂದ ಹಳ್ಳಿಯಿಂದಲ್ಲ ಎಂಬುದು ಗಮನಾರ್ಹ ಸಂಗತಿ.

ಬೇಂದ್ರೆಯವರು ಮಾತೃಶಕ್ತಿಯ ಗಾಢವಾದ ಪ್ರಭಾವಕ್ಕೆ ಒಳಗಾಗಿದ್ದರು ವಿವಾಹವಾದ ನಂತರದ ಹೆಣ್ಣನ್ನು ಅಥವಾ ಹೆಂಡತಿಯನ್ನು ಗೆಳತಿ ಎಂದು ಭಾವಿಸಿ ಸಖೀ ಎಂದು ಕರೆದು ಸಮಾನಭಾವದಿಂದ ನೋಡಿದ್ದಾರೆ. ತಮ್ಮ ಆತ್ಮಕಥೆಯುನ್ನು ಕಾವ್ಯದಲ್ಲಿ ನೀಡುತ್ತ 'ಸಖೀಗೀತ' ಎಂದು ಕರೆದಿದ್ದಾರೆ. ಬೇಂದ್ರೆಯವರು ಹೆಣ್ಣನ್ನು ಹೀಗೆ ಮಾತೆಯಾಗಿ, ಮಡದಿಯಾಗಿ, ಸ್ನೇಹಿತೆಯಾಗಿ ನೋಡಿದ್ದಾರೆ. ಕೆ.ಎಸ್.ನ. ರವರು ಹೆಣ್ಣನ್ನು ಪುರುಷರ ದೃಷ್ಟಿಯ ಮೂಲಕವಾದರೂ ಅವಳು ರೂಪಿಸುವ ಬದುಕನ್ನು ಪ್ರವೃತ್ತಿಗಳ ಮೇಲೆ ಸುಸಂಸ್ಕೃತಿಯ ಮೇಲೆ ನೋಡಿರುವುದು ವಿಶೇಷವಾಗಿದೆ. ಅವರು ಚಿತ್ರಿಸುವ ಪ್ರೀತಿ, ದಾಂಪತ್ಯ, ಕುಟುಂಬ ಮುಂತಾದ ವಿಷಯಗಳಿಗೆ ಮೆರಗು ಬಂದಿದೆ. ಆದರೆ ಇದೆಲ್ಲ ಅನುಭವದ ಮೇಲೆ ನಿಂತಿರುವಂತದ್ದು. ಈ ಅನುಭವ ವೈಯುಕ್ತಿಕವಾದುದಲ್ಲ ಸಾಮಾಜಿಕವಾದುದು ಹೀಗೆ ದ.ರಾ.ಬೇಂದ್ರೆ ಮತ್ತು ಕೆ.ಎಸ್.ನ. ರವರ ಕವಿತೆಗಳ ವೈಶಿಷ್ಟ್ಯಗಳಲ್ಲಿ ಹೆಣ್ಣಿಗೆ ನೀಡಿದ ಮಹತ್ವದ ಸ್ಥಾನವು ಒಂದು ಈ ಕುರಿತು ಯಾವ ಚಳುವಳಿಯೂ ಇಲ್ಲದ ಕಾಲದಲ್ಲಿ ಇವರು ಸ್ತ್ರೀಗೆ ಕೊಟ್ಟಿರುವ ಪ್ರಾಮುಖ್ಯ ಗಮನಿಸುವಂಥದ್ದು.

ಭೂಮಿಯನ್ನು ಕೂಡ ಬೇಂದ್ರೆಯವರು ಮಾತೆಯಾಗಿಯೇ (ಹೆಣ್ಣಾಗಿ) ಪರಿಗ್ರಹಿಸುತ್ತಾರೆ ಇಲ್ಲಿ ಮನುಷ್ಯನ ಮತ್ತೊಂದು ಮುಖವನ್ನು ಹೇಳುವ ಮೂಲಕ ಸ್ತ್ರೀ ಕುಲದ ಮೇಲೆ ಪುರುಷನ ದಬ್ಬಾಳಿಕೆ, ದೌರ್ಜನ್ಯವನ್ನು ಕೂಡ ವಿಶ್ಲೇಷಿಸತೊಡಗುತ್ತಾರೆ. ಬೆಂದ್ರೆಯವರಿಗೆನೆ ಪ್ರಿಯವಾದ ಅವರ ಕವನ 'ಚಿಗರಿಗಂಗಳ ಚೆಲುವಿ'.

ಆಳುಗಳ ಹೋರಾಟ
ಆಳುವವರಿಗೆ ಆಟ
ಗಾಳಕ್ಕ ಸಿಕ್ಕ ಮೀನದ ಗೋಳಾಟೊ
ಗೆಣೆಯಾ ಗೋಳಾಟೋ
ಗೆದ್ದವರ ಇದ್ದವರ ಹಾರಾಟ
ಅರೆಸತ್ತ ಜೀವಾ ಕೊಳೆತಾವೋ
ಹುಳತಾವೋ
ಅಳತಾವೋ
ಹಸುಗೂಸು ತಿರುಗಿ ಹೊಟ್ಟ್ಯಾಗ ಹುಗಿಧ್ಯಾಂಗ ⁰

ಭೂಮಿತಾಯಿ ಮನುಷ್ಯನಿಂದ ಅನುಭವಿಸುವ ಯುಗ ಯುಗದ ಗೋಳುಗಳನ್ನು ತೋಡಿಕೊಳ್ಳುವ ಪರಿಯಲ್ಲಿ ಇರುವುದನ್ನು ಕಾಣಬಹುದು ಇಂತಹ ಭೂಮಿ 'ಕ್ಷಮೆಯೇಷು ಧರಿತ್ರಿ' ಎಂಬ ನುಡಿಯನ್ನು ಪುಡಿಪುಡಿ ಮಾಡುವುದನ್ನು 'ಮೊದಲಗಿತ್ತಿ' ಕವನದಲ್ಲಿ ಕಾಣಬಹುದು.

ಹಿಂಡಾಗಿ ಪುಂಡರು ಅಂಡಲೆಯಲು ನಿನ್ನ
ನೆತ್ತರು ಒರೆಹಚ್ಚಿ ನೋಡಿರುವೆ

ಪಾತಾಳ ಕಂಡರು ಕೆಲ ತಾಯಿಗ್ಗಂಡರು

ಅವರನ್ನು ಮಡಿಲಾಗ ಮಡಗಿಸಿಹೆ

ಹದಿನಾರು ರಾಜರು ತಲೆ ಕೆಳಗಾದರು

ಆದರು ತಲೆಯತ್ತಿ ನಿಂತಿರುವೆ

ನಿನ್ನ ತೇಜದ ಮುಂದೆ ರಾಜತೇಜವು ಕೂಸು

ಮೊದಲಗಿತ್ತಿಯು ನೀನು ಮೆರೆಯುತಿಹ ೧

ಇಲ್ಲಿ 'ಭೂಮಿ' ಮಾತ್ರ ಮಹಿಯಾಗಿ ಕಾಣದೇ ರಕ್ತಕ್ಕೆ ಅಥವಾ ಹಿಂಸೆಗೆ ಹಾತೊರೆಯುವುದನ್ನು ಕಾಣಬಹುದು ಇಂತಹ ಮಾತೆ 'ಕನಸಿನೊಳಗೊಂದು ಕಣಸು' ಕವನದಲ್ಲಿ ತನ್ನ ಬದಲಾದ ಪ್ರವೃತ್ತಿಗೆ ಕಾರಣಗಳನ್ನು ನೀಡುವಂತೆ ಇರುವುದನ್ನು ಕಾಣಬಹುದಾಗಿದೆ. ಹೀಗೆ ಬೇಂದ್ರೆಯವರು ತಮ್ಮ ಕವನಗಳಲ್ಲಿ ಸ್ತ್ರೀ ಸಂವೇದನೆಯ ಬಹುಮುಖತೆ ಅಭಿವ್ಯಕ್ತಿಸಿರುವುದನ್ನ ಕಾಣಬಹುದು.

ದಾಂಪತ್ಯ ಗೀತೆಗಳಲ್ಲಿ ಕೇವಲ ರಮ್ಯತೆಯನ್ನು ಸೂಚಿಸುವುದಷ್ಟೆ ಅಲ್ಲದೆ ಕೌಟುಂಬಿಕ ಜೀವನ ಕಟ್ಟಿಕೊಡುವುದಷ್ಟೆ ಅಲ್ಲದೆ ನಾಡದೇವತೆಯಾಗಿ, ಭೂಮಿತಾಯಿಯಾಗಿ ಹೆಣ್ಣನ್ನ ಚಿತ್ರಿಸಿರುವುದರ ಮೂಲಕ ಭಿನ್ನ ಭಿನ್ನ ಭಾವನೆಗಳನ್ನ 'ಚಿಗುರಿಗಂಗಳ ಚೆಲುವೆ' 'ಮೊದಲಗಿತ್ತಿ' ಹಾಗೂ 'ಕನಸಿನೊಳಗೊಂದು ಕಣಸು' ಕವನದಲ್ಲಿ ಅಭಿವ್ಯಕ್ತಿಸಿದ್ದಾರೆ.

ಪುರುಷಾರ್ಥಗಳಲ್ಲಿ ಒಂದಾದ ಕಾಮವು ಇಂದು ಎಲ್ಲೆ ಮೀರಿ ಹಬ್ಬುತ್ತಿರುವಾಗ ನವೋದಯ ಕವಿಗಳ ದಾಂಪತ್ಯಗೀತೆಗಳಲ್ಲಿ ಕಾಮವು ತನ್ನ ಔಚಿತ್ಯದ ವ್ಯಾಪ್ತಿಯೊಳಗೆ ಮಂದಾಕಿನಿಯಂತೆ ತುಂಬಿ ಹರಿಯುವುದನ್ನು ಕಾಣಬಹುದಾಗಿದೆ. ಕಾವ್ಯ ಜೀವನದ ಗತಿಬಿಂಬವಾಗಿರುವುದು ಇಂತಹ ಸಂದರ್ಭಗಳಲ್ಲಿ ತಾನೇ ತತ್‌ಕ್ಷಣದ ಅಭಿವ್ಯಕ್ತಿಯಷ್ಟೆಯಲ್ಲ ಅದರ ಒಡಲಲ್ಲಿ ನಾಳೆಯ ಭವಿಷ್ಯದ ಹೊಳಹುಗಳನ್ನು ಒಳಗೊಂಡಿರುತ್ತದೆ ಎಂಬುದನ್ನು ಈ ಕವಿಗಳ ಕಾವ್ಯಗಳ ಒಡಲಿನ ಭಾವನೆಯ ಬುಗ್ಗೆಗಳು ಚಿಮ್ಮಿತೊರುತ್ತವೆ.

ಇಂತಹ ಅಧ್ಯಯನಗಳ ಮೂಲಕ ಪರಂಪರೆಯನ್ನು ಮೆಲಕು ಹಾಕುತ್ತಿದ್ದರೆ ಅದರ ಸವಿ ಸಾಂಸ್ಕೃತಿಕ ಅನನ್ಯತೆ ಅರಿವಾಗುವುದರ ಜೊತೆಗೆ ಇಂದಿನ ಜನತೆ ಅದರಿಂದ ದೂರು ಸರಿಯುತ್ತಿರುವುದು ಸಾಮಾಜಿಕ ಸ್ವಾಸ್ಥ್ಯಕ್ಕೆ ಭಂಗವನ್ನುಂಟು ಮಾಡುತ್ತಿದೆ ಎನಿಸದೆ ಇರುವುದು ಇಂತಹ ಸಂದರ್ಭಗಳಲ್ಲಿ ಅಲ್ಲಮ ನುಡಿದ 'ಹಿಂದಣ ಹೆಜ್ಜೆಯನರಿತಲ್ಲದೆ ನಿಂದ ಹೆಜ್ಜೆಯನ್ನು ಅರಿಯಲಾಗದು' ಎಂಬ ಮಾತು ಮೇಲಿಂದ ಮೇಲೆ ನೆನಪಿಗೆ ಬರುತ್ತದೆ.

ದ.ರಾ ಬೇಂದ್ರೆಯವರ ಕಾವ್ಯದಲ್ಲಿ ಬಳಕೆಯಾಗಿರುವುದು ಉತ್ತರ ಕರ್ನಾಟಕದ ಜನಪದ ಉಪಭಾಷೆಯಾಗಿದೆ. ಇವರು ತಮ್ಮ ಕಾವ್ಯಾಭಿವ್ಯಕ್ತಿಗೆ ಉಪಮೆ, ರೂಪಕ, ಶ್ಲೇಷೆ ಮುಂತಾದವುಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಪರಿಣಾಮಕಾರಿಯಾದ ನಾಟಕೀಯತೆಯನ್ನು ಇವರು ತಮ್ಮ ಕಾವ್ಯದಲ್ಲಿ ತಂದಿದ್ದಾರೆ. ಕೆ.ಎಸ್.ನ. ರವರ ಭಾಷೆ ಶಿಷ್ಠ ಆಡುನುಡಿಯಾಗಿದೆ ಆದರೆ ಗ್ರಾಮೀಣ ಭಾಷೆ ಅದಲ್ಲ ಆದರೆ

ಕನ್ನಡ ಜನಪದ ಸಾಹಿತ್ಯದಿಂದ ಕೆಲಮಟ್ಟಿಗೆ ಪ್ರಭಾವಿತರಾಗಿದ್ದಾರೆ. ಕೆ.ಎಸ್.ನ ಅವರು ಜನರ ಬದುಕು ಮತ್ತು ಭಾಷೆಯನ್ನು ತಮ್ಮ ಅನುಭವ ಮತ್ತು ಅಭಿವ್ಯಕ್ತಿಯನ್ನಾಗಿ ಮಾಡಿಕೊಂಡಿದ್ದಾರೆ ಅದರಲ್ಲಿ ಹಳ್ಳಿ ಮತ್ತು ಪಟ್ಟಣ ಎಂಬ ವ್ಯತ್ಯಾಸವಿಲ್ಲ ಒಟ್ಟಾರೆ ಭಾವ-ಭಾಷೆಯ ಸಂಬಂಧ ಕೆ.ಎಸ್.ನ ಕವಿತೆಗಳಲ್ಲಿ ಕಂಡು ಬರುತ್ತದೆ.

ಹೆಣ್ಣು ಗಂಡಿನ ಸಂಬಂಧವಷ್ಟೆ ದಾಂಪತ್ಯ ಜೀವನವಲ್ಲ, ಸಾಮರಸ್ಯ ಸಹಬಾಳ್ವೆಯ ಜೀವನವೇ ನಿಜವಾದ ದಾಂಪತ್ಯ ಆಧುನಿಕ ಜೀವನದ ಒತ್ತಡದಲ್ಲಿ ಕ್ರಮೇಣ ಇಂತಹ ಆದರ್ಶ ದಾಂಪತ್ಯ ಜೀವನ ಕಣ್ಮರೆಯಾಗಿದೆಯೇನೋ ಅನಿಸುತ್ತಿದೆ. ಅಪರಿಚಿತವಾದ ಗಂಡು ಹೆಣ್ಣು ಮದುವೆಯಾಗಿ ಎಷ್ಟೋ ಕಾಲ ಬಾಳಿ ಬದುಕಿ ಮಕ್ಕಳನ್ನು ಹೆತ್ತು ಹೊತ್ತು ಸಾಕಿ ಸಲಹಿ ಹಲವು ನೋವುಗಳ ಮಧ್ಯೆದಲ್ಲಿಯೂ ನಲವಿನ ಕ್ಷಣಗಳನ್ನು ಅನುಭವಿಸುವಂತಹ ಇಂತಹ ದಾಂಪತ್ಯ ತುಂಬಾ ಮಹತ್ವ ಪೂರ್ಣವಾದುದು.

# ಪರಾಮರ್ಶನ ಗ್ರಂಥಗಳು


೧. ಅಂಬಿಕಾತನದತ್ತರ ಸಮಗ್ರ ಕಾವ್ಯವಿನ್ಯಾಸ ಸಂಪುಟ ೧ — ಸಂಪಾದಕರು ವಾಮನಬೇಂದ್ರೆ

೨. ಅಂಬಿಕಾತನದತ್ತರ ಸಮಗ್ರ ಕಾವ್ಯವಿನ್ಯಾಸ ಸಂಪುಟ ೨ — ಸಂಪಾದಕರು ವಾಮನಬೇಂದ್ರೆ

೩. ಅಂಬಿಕಾತನದತ್ತರ ಸಮಗ್ರ ಕಾವ್ಯವಿನ್ಯಾಸ ಸಂಪುಟ ೩ — ಸಂಪಾದಕರು ವಾಮನಬೇಂದ್ರೆ

೪. ಅಂಬಿಕಾತನದತ್ತರ ಸಮಗ್ರ ಕಾವ್ಯವಿನ್ಯಾಸ ಸಂಪುಟ ೪ — ಸಂಪಾದಕರು ವಾಮನಬೇಂದ್ರೆ

೫. ಮಲ್ಲಿಗೆಯ ಮಾಲೆ ಲಿಪಿ ಪ್ರಕಾಶನ ೨೦೦೪ — ಸಂಪಾದಕರು ಬಾ.ಕಿ.ನ.

೬. ಚಂದನ — ಸಂಪಾದಕರು ಜಿ.ಎಸ್.ಶಿವರುದ್ರಪ್ಪ

೭. ಹಾಡೆ ಹಾದಿಯ ತೋರಿತು — ಸಂಪಾದಕರು ಹೆಚ್.ಎಸ್.ರಾಘವೇಂದ್ರರಾವ್

೮. ಹಾಡು ಪಾಡು — ಸಂಪಾದಕರು ವಾಮನಬೇಂದ್ರೆ ೧೯೬೭

೯. ಸಖೀ ಗೀತ — ಸಂಪಾದಕರು ವಾಮನಬೇಂದ್ರೆ ೧೯೮೭

೧೦. ಬೇಂದ್ರೆಯವರ ಕಾವ್ಯದಲ್ಲಿ ಪ್ರೇಮದ ಆವಿಷ್ಕಾರಗಳು ಡಾ. ಬಸವರಾಜ ಕಲ್ಗುಡಿ — ಪ್ರಕಟಣೆ ಕ್ರೈಸ್ಟ್ ಕಾಲೇಜ್ ೧೯೮೭

೧೧. ಭುವನದ ಭಾಗ್ಯ — ಜಿ.ಎಸ್. ಅಮೂರ್

೧೨. ಭೃಂಗದ ಬೆನ್ನೇರಿ — ಕೀರ್ತನಾಥ ಕುರ್ತಕೋಟಿ

೧೩. ದ.ರಾ.ಬೇಂದ್ರೆ — ಕೀರ್ತನಾಥ ಕುರ್ತಕೋಟಿ

೧೪. ಸಾಹಿತ್ಯ ಮತ್ತು ಅಭಿರುಚಿ — ಶಂಕರ ಮುಕಾಶಿ ಪುಣೇಕರ

೧೫. ಸಾಹಿತ್ಯದ ವಿರಾಟ ಸ್ವರೂಪ — ದ.ರಾ. ಬೇಂದ್ರೆ

೧೬. ತರಗತಿಯ ಟಿಪ್ಪಣಿಗಳು — ಜಿ.ಹೆಚ್.ನಾಯಕ

೧೭. ಬೇಂದ್ರೆ ಕಾವ್ಯದ ವಿಭಿನ್ನ ನೆಲೆಗಳು — ಸುಮತೀಂದ್ರ ನಾಡಿಗ

